ಪರಮ ದಯಾಮಯನೂ ಕೃಪಾಶೀಲನೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಒಳಿತನ್ನು ಸ್ಥಾಪಿಸುವುದು ಮತ್ತು ಕೆಡುಕನ್ನು ಅಳಿಸುವುದು ಒಂದು ಉತ್ತಮ ಸಮುದಾಯದ ಕರ್ತವ್ಯವಾಗಿದೆ. ಮುಸ್ಲಿಮರನ್ನು ಪವಿತ್ರ ಕುರ್‌ಆನ್ ಉತ್ತಮ ಸಮುದಾಯವೆಂಬ ಬಿರುದಿನಿಂದ ಕರೆದಿದೆ. ಆದರೆ ಮುಸ್ಲಿಮರು ಇಂದಿನ ಕಾಲಘಟ್ಟದಲ್ಲಿ ಅನೇಕ ಗುಂಪುಗಳಾಗಿ ಪರಸ್ಪರರ ವಿರುದ್ಧ ಕೆಸರೆರಚುವ ಕೆಲಸದಲ್ಲಿ ನಿರತರಾಗಿದ್ದಾರೆ. ಮುಸ್ಲಿಮ್ ಯುವಜನತೆ ಮಾದಕ ವ್ಯಸನಗಳ ದಾಸರಾಗುತ್ತಿದ್ದಾರೆ. ಇದನ್ನು ಸಂಘಟಿತ ಶಕ್ತಿಯಿಂದ ಮಾತ್ರ ತಡೆಗಟ್ಟಲು ಸಾಧ್ಯ.

ಅದೇ ವೇಳೆ, ಪ್ರತಿಯೊಬ್ಬನೂ ತನ್ನನ್ನು ಸಂಸ್ಕರಿಸಿ, ಕೆಡುಕಿನ ವಿರುದ್ಧ ಸೆಟೆದು ನಿಲ್ಲುವ ಮೂಲಕ ಒಳಿತನ್ನು ವ್ಯಾಪಕಗೊಳಿಸಬೇಕಾಗಿದೆ. ಜತೆಗೆ ಸಂಘಟಿತ ಶಕ್ತಿಯ ಮೂಲಕ ಕೆಡುಕುಗಳ ವಿರುದ್ಧ ಹೋರಾಡಲು ಪ್ರಯತ್ನಿಸಬೇಕಾಗಿದೆ. ಅಂತಹ ಜನಕೂಟಕ್ಕೆ ಇಹ-ಪರಗಳಲ್ಲಿ ಯಶಸ್ಸು ಖಚಿತವಾಗುವುದು.

ಆದ್ದರಿಂದ ಉತ್ತಮ ಸಮುದಾಯದ ರೂಪುರೇಷೆಗಳು, ಅದರ ಹೊಣೆ ಗಾರಿಕೆಗಳು ಮತ್ತು ಅದರ ರೀತಿ-ನೀತಿಗಳ ಬಗ್ಗೆ ಜನಾಬ್ ಮುಹಮ್ಮದ್ ಅಬ್ದುಲ್ಲಾ ಜಾವೀದ್‌ರವರು ಉರ್ದುವಿನಲ್ಲಿ ರಚಿಸಿದ 'ಬೆಹತರೀನ್ ಉಮ್ಮತ್' ಎಂಬ ಕೃತಿಯಲ್ಲಿ ಸವಿಸ್ತಾರವಾಗಿ ಪರಿಚಯಿಸಿದ್ದಾರೆ. ಇದನ್ನು ಮುಹಮ್ಮದ್ ಅಶ್ರಫ್ ಬಾವಾ ಸರಳವಾಗಿ ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಈ ಕೃತಿಯ ಅಧ್ಯಯನದಿಂದ ಸಮುದಾಯಕ್ಕೆ ಆತ್ಮಸಂಸ್ಕರಣೆ ನಡೆಸ ಲು ಸ್ಫೂರ್ತಿ ದೊರೆಯಬಹುದು; ಮತ್ತು ಇದು ಪ್ರತಿ ಮುಸ್ಲಿಮರ ಮನೆಯಲ್ಲೂ ಇರಬೇಕಾದ ಅಗತ್ಯದ ಕೃತಿಯಾಗಿದೆ.

— ಶಾಂತಿ ಪ್ರಕಾಶನ

# ಅನುಕ್ರಮಣಿಕೆ

# ಉತ್ತಮ ಸಮುದಾಯ

ಪ್ರತಿಯೊಂದು ವಸ್ತುವಿಗೂ ಒಂದು ಗುರುತು ಇರುತ್ತದೆ ಎಂಬುದನ್ನು ನಾವು ತಿಳಿದಿದ್ದೇವೆ. ಸುಗಂಧವು ಹೂವಿನ ಗುರುತಾದರೆ, ಸುರುಚಿಯು ಹಣ್ಣಿನ ಗುರುತು; ಶಾಖವು ಸೂರ್ಯನ ಗುರುತಾದರೆ, ತಂಪು ಚಂದ್ರಮನ ಗುರುತು. ವಿಶ್ವದಲ್ಲಿ ಕಾಣಸಿಗುವ ಪ್ರತಿಯೊಂದು ಸೃಷ್ಟಿಗೂ ಒಂದು ಗುರುತು ಇರುತ್ತದೆ. ಅಂತೆಯೇ ಇಡೀ ವಿಶ್ವದಲ್ಲಿ ಮಾನವನಿಗೆ ವಿಶೇಷವಾದ ಒಂದು ಗುರುತಿದೆ. ಮಾನವನು ಸೃಷ್ಟಿ ಶ್ರೇಷ್ಠನಾಗಿದ್ದಾನೆ. ಅಂದರೆ ವಿಶ್ವದಲ್ಲಿ ಕಾಣಸಿಗುವ ಸಕಲ ಸೃಷ್ಟಿಗಳಲ್ಲಿ ಅತ್ಯಂತ ಗೌರವಾರ್ಹ, ಸನ್ಮಾನ್ಯ ಮತ್ತು ಪ್ರತಿಷ್ಠಿತ ಸ್ಥಾನವು ಮಾನವನದ್ದಾಗಿದೆ. ಇದಕ್ಕೆ ಕಾರಣ ಮಾನವನು ಸಕಲ ಸೃಷ್ಟಿಗಳಲ್ಲಿ ಅತ್ಯಂತ ಬಲಶಾಲಿಯಾಗಿದ್ದಾನೆ ಎಂಬುದಲ್ಲ; ಬದಲಾಗಿ ಅಲ್ಲಾಹನು ಇತರ ಸೃಷ್ಟಿಗಳಿಗೆ ನೀಡಿರದ ಕೆಲವು ವಿಶೇಷ ಗುಣಗಳನ್ನು ಮಾನವನಿಗೆ ನೀಡಿರುವುದಾಗಿದೆ. ಅಂದರೆ ಮಾನವನು ಒಳಿತು ಮತ್ತು ಕೆಡುಕುಗಳ ನಡುವಿನ ವ್ಯತ್ಯಾಸವನ್ನು ಅರಿಯಬಲ್ಲನು. ಸರಿ–ತಪ್ಪು ಮತ್ತು ಸತ್ಯ–ಮಿಥ್ಯಗಳ ನಡುವಿನ ಅಂತರವನ್ನು ಚೆನ್ನಾಗಿ ಅರಿಯುವಂತಹ ಹೃದಯವನ್ನು ಅಲ್ಲಾಹನು ಮಾನವನಿಗೆ ನೀಡಿದ್ದಾನೆ. ಮೇಲಾಗಿ ಅವನಿಗೆ ಜ್ಞಾನವನ್ನು ದಯಪಾಲಿಸಲಾಗಿದೆ ಮತ್ತು ಅಲ್ಲಾಹನು ಅವನನ್ನು ತನ್ನ ಪ್ರಕೃತಿಯಲ್ಲಿ ಸೃಷ್ಟಿಸಿದ್ದಾನೆ.

ಮಾನವನ ಈ ವಿಶೇಷ ಗುಣಗಳ ಆಧಾರದಲ್ಲಿ, ವಿಶ್ವದ ಯಾವುದೇ ದೊಡ್ಡ ಸೃಷ್ಟಿಯಲ್ಲೂ ಈ ಗುಣಗಳಿಲ್ಲ ಎಂದು ಹೇಳಬಹುದಾಗಿದೆ. ಇನ್ನು ಆ ಸೃಷ್ಟಿಗಳಿಗೆ ಮಾರ್ಗದರ್ಶನ ನೀಡುವುದಕ್ಕೆ ಸಂಬಂಧಿಸಿ ಹೇಳುವುದಾದರೆ, ಅಲ್ಲಾಹನು ಅವುಗಳಿಗೆ ಏನು ಮಾಡಬೇಕು ಮತ್ತು ಏನು ಮಾಡಬಾರದು ಎಂಬುದಕ್ಕೆ ನೇರ ಅರಿವನ್ನು (Intution) ನೀಡುತ್ತಾನೆ. ಹಾಗಾಗಿ ಸಸ್ಯಾಹಾರಿ ಪ್ರಾಣಿಗಳು ಸಸ್ಯಾಹಾರದಲ್ಲಿಯೇ ಜೀವನ ಸಾಗಿಸುತ್ತವೆ ಮತ್ತು ಮಾಂಸಾಹಾರಿ ಪ್ರಾಣಿಗಳು ಮಾಂಸಾಹಾರದಲ್ಲಿಯೇ ಜೀವನ ಸಾಗಿಸುತ್ತವೆ. ಅಂತೆಯೇ ಪಕ್ಷಿಗಳು ಸ್ವಯಂ ತಂತಮ್ಮ ಅಶನ–ವಸತಿಯ

ವ್ಯವಸ್ಥೆಯನ್ನು ಮಾಡುತ್ತವೆ. ಅದೇ ರೀತಿ ಭೂಮ್ಯಾಕಾಶಗಳ ಇತರ ಸೃಷ್ಟಿಗಳು. ಅವು ಕೂಡ ಅಲ್ಲಾಹನ ನಿಯಮಗಳಿಗೆ ಅಧೀನವಾಗಿಯೇ ಕಾರ್ಯಾಚರಿಸುತ್ತಿವೆ. ಅದನ್ನು ಪವಿತ್ರ ಕುರ್‌ಆನಿನಲ್ಲಿ ಅವನು ಭೂಮಿ ಮತ್ತು ಆಕಾಶಗಳ ಸಕಲ ವಸ್ತುಗಳನ್ನು ನಿಮಗಾಗಿ ನಿಯಂತ್ರಿಸಿ ಕೊಟ್ಟನು ಎಂದು ಹೇಳುವ ಮೂಲಕ ಸ್ಪಷ್ಟಪಡಿಸಲಾಗಿದೆ.

## ಮಾನವನಲ್ಲಿರುವ ಕೆಲವು ಸ್ವಾಭಾವಿಕ ಬೇಡಿಕೆಗಳು

ಸಕಲ ವಿಶ್ವದಲ್ಲಿ ಅಲ್ಲಾಹನ ಆದೇಶವೇ ನಡೆಯುತ್ತದೆ ಎಂಬುದನ್ನು ನಾವು ಬಲ್ಲೆವು. ಭೂಮಿ ಮತ್ತು ಆಕಾಶಗಳ ಸಕಲ ವಸ್ತುಗಳೂ ಅಲ್ಲಾಹನ ಆದೇಶದಂತೆಯೇ ಕಾರ್ಯಾಚರಿಸುತ್ತಿವೆ. ಆದರೆ ಮಾನವನಿಗೆ ಮಾತ್ರ ಕರ್ಮ ಸ್ವಾತಂತ್ರ್ಯವನ್ನು ನೀಡಲಾಗಿದೆ. ಅಲ್ಲಾಹನು ಅವನಲ್ಲಿ ವಿಶೇಷ ಗುಣಗಳನ್ನು ಇರಿಸಿದ್ದಾನೆ, ಅವುಗಳ ಕಾರಣದಿಂದ ಅವನು ಸೃಷ್ಟಿಗಳಲ್ಲಿ ಶ್ರೇಷ್ಠನಾಗಿ ಪರಿಗಣಿಸಲ್ಪಡುತ್ತಾನೆ, ಅವುಗಳನ್ನು ಬಳಸುತ್ತಾ ತನ್ನ ಸೃಷ್ಟಿಕರ್ತನನ್ನು ಗುರುತಿಸಲು, ಅವನ ಇಚ್ಛೆಯನ್ನು ಪಾಲಿಸಲು, ಅವನ ಆದೇಶಾನುಸಾರ ಜೀವನ ಸಾಗಿಸಲು, ತನ್ನ ಎಲ್ಲ ವೈಯಕ್ತಿಕ ಮತ್ತು ಸಾಮೂಹಿಕ ವ್ಯವಹಾರಗಳಲ್ಲಿ ಕುರ್‌ಆನ್ ಮತ್ತು ಪ್ರವಾದಿಚರ್ಯೆಯಂತೆ ವ್ಯವಹರಿಸಲು ಹಾಗೂ ತನ್ನ ಸುತ್ತಮುತ್ತಲ ಪರಿಸರವನ್ನು ಅಲ್ಲಾಹನ ಆದೇಶದಂತೆ ಅತ್ಯುತ್ತಮಗೊಳಿಸಲು ಅವನಿಗೆ ತಿಳಿಸಲಾಗಿದೆ.

ಮಾನವನ ಮುಂದಿಟ್ಟಿರುವ ಈ ಬೇಡಿಕೆಗಳು ತೀರಾ ಸ್ವಾಭಾವಿಕವಾಗಿವೆ. ಅಂದರೆ ಯಾವ ವಿಶೇಷ ಗುಣಗಳನ್ನು ಅವನಿಗೆ ನೀಡಲಾಗಿದೆಯೋ ಮತ್ತು ಯಾವ ಪ್ರಕೃತಿಯಲ್ಲಿ ಅವನನ್ನು ಸೃಷ್ಟಿಸಲಾಗಿದೆಯೋ ಅವುಗಳ ಪ್ರಕಾರ ಕರ್ಮವೆಸಗಲಷ್ಟೇ ಹೇಳಲಾಗುತ್ತಿದೆ. ಅಂದರೆ ಈ ಬೇಡಿಕೆಗಳು, ಒಬ್ಬ ರೈತನಿಗೆ ನೀಡಲಾಗಿರುವ ಬೀಜ ಮತ್ತು ಗೊಬ್ಬರದ ಮೂಲಕ ಬೇಸಾಯ ಮಾಡಬೇಕೆಂದು ಹೇಳುವಂತೆಯೇ ಇದೆ. ಮಾನವನ ಮುಂದಿಡಲಾಗಿರುವ ಬೇಡಿಕೆಗಳು ಎಷ್ಟರ ಮಟ್ಟಿಗೆ ಸ್ವಾಭಾವಿಕವಾಗಿವೆ ಎಂಬುದನ್ನು ತಿಳಿಯಲು ಪವಿತ್ರ ಕುರ್‌ಆನಿನ ಸಹಾಯ ಪಡೆಯೋಣ. ಈ ಗ್ರಂಥವು ಯಾವ ರೀತಿ ಮಾನವನ ಮುಂದೆ ಪ್ರಶ್ನೆಗಳನ್ನಿಡುತ್ತದೆ ಎಂಬುದನ್ನು ನೋಡಿ. ಪ್ರಶ್ನೆಗಳನ್ನಿಡುವುದರ ಅರ್ಥವೇನೆಂದರೆ, ಅದಕ್ಕೆ ಉತ್ತರಿಸುವ ಮಾನವನು ಅಲ್ಲಾಹನ ಎಲ್ಲ ಆದೇಶಗಳನ್ನೂ ಪಾಲಿಸಬಲ್ಲನು ಎಂದಾಗಿದೆ.

قُلْ مَنْ يَّرْزُقُكُمْ مِّنَ السَّمَآءِ وَالْاَرْضِ

“ನಿಮಗೆ ಆಕಾಶಗಳಿಂದಲೂ ಭೂಮಿಯಿಂದಲೂ ಜೀವನಾಧಾರ ನೀಡುತ್ತಿರುವವನಾರು ಎಂದು ಅವರೊಡನೆ ಕೇಳಿರಿ.” (ಯೂನುಸ್: 31)

أَمَّنْ يَهْدِيكُمْ فِي ظُلُمَٰتِ الْبَرِّ وَالْبَحْرِ

"ನೆಲ ಹಾಗೂ ಸಾಗರಗಳ ಅಂಧಕಾರಗಳಲ್ಲಿ ನಿಮಗೆ ದಾರಿ ತೋರಿಸುವವನು ಯಾರು?" (ಅನ್ನಮ್ಲ್: 63)

أَفَرَءَيْتُمُ الْمَآءَ الَّذِى تَشْرَبُونَ ﴿٦٨﴾

"ನೀವು ಕುಡಿಯುವ ನೀರಿನ ಬಗ್ಗೆ ಎಂದಾದರೂ ವಿವೇಚಿಸಿದ್ದುಂಟೇ?"

(ಅಲ್ ವಾಕಿಅ: 68)

أَفَلَا يَنظُرُونَ إِلَى الْإِبِلِ كَيْفَ خُلِقَتْ ﴿١٧﴾

"ಒಂಟೆಗಳು ಹೇಗೆ ಸೃಷ್ಟಿಸಲ್ಪಟ್ಟಿವೆ ಎಂಬುದನ್ನು ಇವರು ನೋಡುವುದಿಲ್ಲವೇ?"

(ಅಲ್ ಗಾಶಿಯಾ: 17)

أَلَيْسَ اللَّهُ بِأَحْكَمِ الْحَٰكِمِينَ ﴿٨﴾

"ಅಲ್ಲಾಹನು ಎಲ್ಲ ಅಧಿಪತಿಗಳಿಗಿಂತಲೂ ಮಹಾ ಅಧಿಪತಿಯಲ್ಲವೇ?"

(ಅತ್ತೀನ್: 8)

ಈ ಬೇಡಿಕೆಗಳ ಈಡೇರಿಕೆಗಳಿಗಾಗಿಯೇ ಮಾನವನು ಈ ಲೋಕಕ್ಕೆ ಬಂದಿರುವನು ಎಂದು ನೀವು ಸ್ಪಷ್ಟವಾಗಿ ಹೇಳಬಲ್ಲಿರಿ. ಅಂದರೆ ಮಾನವನು ತನ್ನ ಪ್ರಕೃತಿಯಂತೆ ಬಾಳಿದರೆ, ತನ್ನ ನೈಜ ಸೃಷ್ಟಿಕರ್ತನನ್ನು ಅರಿತರೆ ಮತ್ತು ಅವನ ಇಚ್ಛೆಯಂತೆ ಜೀವನ ಸಾಗಿಸಿದರೆ ಇಹ-ಪರಗಳಲ್ಲಿ ಯಶಸ್ವಿಯಾಗುವನು.

## ವಿಶ್ವಾಸ ಮತ್ತು ಪ್ರೀತಿ

ಮಾನವನಲ್ಲಿ ಒಂದು ವಿಶೇಷತೆ ಇದೆ. ಅಲ್ಲಾಹನು ತನಗೆ ನೀಡಿರುವ ವಿಶೇಷತೆಗಳ ಮೂಲಕ ಜಗತ್ತಿನಲ್ಲಿ ಸ್ವಯಂ ಉತ್ತಮ ವ್ಯಕ್ತಿಯಾಗಿ ಜೀವಿಸುವುದರ ಜತೆಗೆ ತನ್ನ ಪತ್ನಿ-ಮಕ್ಕಳನ್ನೂ ಸುತ್ತಲ ಪರಿಸರವನ್ನೂ ಉತ್ತಮಗೊಳಿಸಲು ಪ್ರಯತ್ನಿಸಬಲ್ಲನು. ಈ ಕಾರ್ಯಗಳು ಕೆಲವೇ ಕೆಲವು ಬೇಡಿಕೆಗಳನ್ನು ಈಡೇರಿಸುವ ವ್ಯಕ್ತಿಯ ಮಟ್ಟಿಗೆ ಸುಲಭವಾಗುವುದು. ಅಂದರೆ ವಿಶೇಷತೆಗಳನ್ನು ಹೊಂದಿರುವುದು ಸ್ವಯಂ ಯಶಸ್ಸಿನ ಉಪಾಧಿಯಾಗಲಾರದು; ಬದಲಾಗಿ ಅವುಗಳನ್ನು ಬಳಕೆಗೆ ತಂದಾಗಲೇ ಅದು ಸಾಧ್ಯವಾಗುವುದು. ಮನೆಯಲ್ಲಿ ಎಷ್ಟೇ ಉತ್ತಮವಾದ ವಸ್ತುಗಳಿದ್ದರೂ ಅವು ಕತ್ತಲಲ್ಲಿ

ಕಾಣಿಸಲಾರವು. ಓರ್ವ ಕುಶಾಗ್ರಮತಿಯಾದ ವಕೀಲನು ತಾನು ಗಳಿಸಿದ ವಿದ್ಯೆಯನ್ನು ಉಪಯೋಗಕ್ಕೆ ತರದೆ ಮನೆಯಲ್ಲಿ ಕೂತಿದ್ದರೆ, ಅವನು ಎಂದಿಗೂ ಯಶಸ್ಸನ್ನು ಗಳಿಸಲಾರನು. ಮನೆಯಲ್ಲಿರುವ ವಸ್ತು ಕಾಣಿಸಬೇಕಾದರೆ ಬೆಳಕು ಮತ್ತು ಉತ್ತಮ ವಕೀಲನ ಯಶಸ್ಸಿಗೆ ಪ್ರಯತ್ನವು ಹೇಗೆ ಅಗತ್ಯವೋ ಅದೇ ರೀತಿ ಮಾನವನಿಗೆ ಅಲ್ಲಾಹನು ದಯಪಾಲಿಸಿರುವ ಗುಣಗಳು ಮತ್ತು ವಿಶೇಷತೆಗಳು ಪರಿಣಾಮಕಾರಿ ಎನಿಸಬೇಕಾದರೆ,

- ಅವನು ಅಲ್ಲಾಹನಲ್ಲಿ ವಿಶ್ವಾಸ ತಾಳಬೇಕು.
- ಅವನ ಹೃದಯದಲ್ಲಿ ಅಲ್ಲಾಹನಿಗಾಗಿ ಅತೀವ ಪ್ರೀತಿ ಇರಬೇಕು.

ಒಂದು ವೇಳೆ ಮಾನವನ ಹೃದಯವು ವಿಶ್ವಾಸ ಮತ್ತು ಪ್ರೀತಿಯಿಂದ ವಂಚಿತವಾಗಿದ್ದರೆ, ಅವನು ಒಂದು ಉತ್ತಮ ಜೀವನವನ್ನು ಎಂದಿಗೂ ನಡೆಸಲಾರನು. ಹಾಗಾಗಿ ಅಲ್ಲಾಹನು ವಿಶ್ವಾಸಿಗಳ ಗುರುತಾಗಿ ವಸ್ತುತಃ ಸತ್ಯವಿಶ್ವಾಸಿಗಳು ಅತ್ಯಧಿಕವಾಗಿ ಅಲ್ಲಾಹನನ್ನು ಪ್ರೀತಿಸುತ್ತಾರೆ (ಅಲ್ ಬಕರ: 165) ಎಂದು ಹೇಳಲಾಗಿದೆ.

ಅಲ್ಲಾಹನ ಮೇಲೆ ಅತ್ಯಧಿಕ ಪ್ರೀತಿಯ ಅನಿವಾರ್ಯ ಪರಿಣಾಮವು ಪ್ರವಾದಿವರ್ಯರ(ಸ) ಮೇಲೆ ಪ್ರೀತಿ ಮತ್ತು ಅವರ ಅನುಸರಣೆಯಾಗಿದೆ. ಹೀಗೆ ಅಲ್ಲಾಹ್ ಮತ್ತು ಅವನ ಸಂದೇಶವಾಹಕರ(ಸ) ಮೇಲಿನ ಪ್ರೀತಿಯು ಜಗತ್ತಿನ ಸಕಲ ವಸ್ತುಗಳಿಗಿಂತಲೂ ಮಿಗಿಲಾಗಿ ಬಿಡುವುದೇ ಯಶಸ್ವೀ ಜೀವನದ ರಹಸ್ಯವಾಗಿದೆ. ಅಲ್ಲಾಹನ ಸಂದೇಶವಾಹಕರು(ಸ) ಹೇಳುತ್ತಾರೆ: ಒಬ್ಬನ ಮಟ್ಟಿಗೆ ಅಲ್ಲಾಹ್ ಮತ್ತು ಅವನ ಸಂದೇಶವಾಹಕರು(ಸ) ಸಕಲ ವಸ್ತುಗಳಿಗಿಂತಲೂ ಹೆಚ್ಚು ಪ್ರಿಯವಾಗುವ ವರೆಗೆ, ಅವನು ವಿಶ್ವಾಸಿ ಎನಿಸಲಾರನು.

ಹೃದಯವು ಅಲ್ಲಾಹ್ ಮತ್ತು ಅವನ ಸಂದೇಶವಾಹಕರ(ಸ) ಪ್ರೀತಿಯಿಂದ ಪುನೀತವಾದರೆ, ಅಲ್ಲಾಹನು ದಯಪಾಲಿಸಿರುವ ಜ್ಞಾನ ಮತ್ತು ಒಳಿತು-ಕೆಡುಕುಗಳ ವ್ಯತ್ಯಾಸ ಅರಿಯುವ ಪ್ರಜ್ಞೆಯು ಅವನ ಮಟ್ಟಿಗೆ ದೊಡ್ಡ ಶಕ್ತಿಶಾಲಿ ಮಾಧ್ಯಮವಾಗಿ ಬಿಡುವುದು. ಸದ್ಯ ಇರುವ ಸಂಪನ್ಮೂಲಗಳನ್ನು ಜಾಗರೂಕತೆಯಿಂದ ಮತ್ತು ಏಕಾಗ್ರತೆಯಿಂದ ಬಳಸಿದರೆ ಬಹಳ ಪ್ರಯೋಜನಕಾರಿಯಾಗಿ ಪರಿಣಮಿಸುವುದು. ಉದಾಹರಣೆಗೆ: ಒಬ್ಬನ ಬಳಿ ಕೆಲವು ಲಕ್ಷ ರುಪಾಯಿಗಳಿದ್ದರೆ, ಅದನ್ನು ಹಲವು ವ್ಯವಹಾರಗಳಲ್ಲಿ ಹೂಡುವುದರ ಬದಲು ಒಂದೇ ಉದ್ದಿಮೆಯಲ್ಲಿ ಹೂಡಿದರೆ ಉತ್ತಮ ಲಾಭ ಗಳಿಸುವ ಸಾಧ್ಯತೆ ಇರುತ್ತದೆ. ಐಹಿಕ ಜೀವನವು ಸಂಕ್ಷಿಪ್ತವಾದುದು ಮತ್ತು

ಬೇಡಿಕೆಗಳು ಹಲವಾರು. ಆದ್ದರಿಂದ ಯಶಸ್ವೀ ಜೀವನ ಸಾಗಿಸಬೇಕಾದರೆ ಮತ್ತು ಬೇಡಿಕೆಗಳ ಈಡೇರಿಕೆಗೆ ಏಕಾಗ್ರತೆಯ ಅಗತ್ಯ ಬಹಳ ಇದೆ. ಏಕಾಗ್ರತೆಯ ಹೊರತು ದೊಡ್ಡ ಕಾರ್ಯವು ಸಾಧಿತವಾಗಲಾರದು. ಮಾನವನ ಸಕಲ ಆಗ್ರಹಗಳು ಧರ್ಮದ ಪ್ರಕಾರ ಇದ್ದರೆ, ಅರ್ಥಾತ್ ಮಾನವನ ಚಿಂತನೆ ಮತ್ತು ಕರ್ಮಗಳು ಕುರ್‌ಆನ್ ಮತ್ತು ಸುನ್ನತ್‌ನೊಂದಿಗೆ ಅಗಾಧ ಸಂಬಂಧವನ್ನು ಹೊಂದಿದ್ದರೆ ಅವನು ಯಶಸ್ವಿಯಾಗುವನು ಎಂಬುದಾಗಿದೆ ಪ್ರಸ್ತುತ ಪ್ರವಾದಿವಚನದ ತಾತ್ಪರ್ಯ. ಇಹಲೋಕದಲ್ಲಿರುತ್ತಾ ಯಾವ ಉದ್ದೇಶದ ಗಳಿಕೆಗಾಗಿ ನಾವು ಏಕಾಗ್ರತೆಯನ್ನು ಹೊಂದಬೇಕೋ ಅದರಲ್ಲಿ ಯಶಸ್ಸು ಗಳಿಸಬೇಕಾದರೆ ಅಲ್ಲಾಹ್ ಮತ್ತು ಅವನ ಸಂದೇಶವಾಹಕರು(ಸ) ನಮಗೆ ಸಕಲ ವಸ್ತುಗಳಿಗಿಂತಲೂ ಹೆಚ್ಚು ಪ್ರಿಯವಾಗಬೇಕು.

ನಿಮ್ಮ ಪೈಕಿ ಒಬ್ಬನ ಆಗ್ರಹಗಳು ನಾನು ತಂದಿರುವಂತಹ ಶರೀಅತ್‌ಗೆ ಅನುಗುಣವಾಗುವ ವರೆಗೆ ಅವನು ವಿಶ್ವಾಸಿ ಎನಿಸಲಾರನು ಎಂದು ಪ್ರವಾದಿ ವರ್ಯರು(ಸ) ಹೇಳಿದ್ದಾರೆ. ಅಂದರೆ ನಮ್ಮ ದೃಷ್ಟಿಯ ಮುಂದೆ ಕೇವಲ ಅಲ್ಲಾಹ್ ಮತ್ತು ಅವನ ಸಂದೇಶವಾಹಕರ(ಸ) ಆದೇಶಗಳಿರಬೇಕು; ಸಂಪೂರ್ಣ ಏಕಾಗ್ರತೆಯೊಂದಿಗೆ ಅಲ್ಲಾಹನ ದಾಸ್ಯ-ಆರಾಧನೆ ನಡೆಯಬೇಕು; ವೈಯಕ್ತಿಕ ಲಾಭಗಳು ಮತ್ತು ಖಾಸಗಿ ಸಮಸ್ಯೆಗಳ ಬದಲು ನಮ್ಮ ಗಮನವು ಮಾನವೀಯ ಸಮಸ್ಯೆಗಳ ಮೇಲಿರಬೇಕು. ಇದುವೇ ಅಲ್ಲಾಹ್ ಮತ್ತು ಅಲ್ಲಾಹನ ಸಂದೇಶವಾಹಕರ(ಸ) ಮೇಲಿನ ಪ್ರೀತಿಯ ಬೇಡಿಕೆಯಾಗಿದೆ. ಈ ಬೇಡಿಕೆಗಳ ಈಡೇರಿಕೆಯೇ ನಮ್ಮನ್ನು ಜಗತ್ತಿನ ಅನುಪಮ ಮತ್ತು ಅತ್ಯುತ್ತಮ ಕೂಟವಾಗಿ ಮಾರ್ಪಡಿಸುತ್ತದೆ.

## ಮುಸ್ಲಿಮರು - ಈ ಜಗತ್ತಿನ ಅತ್ಯುತ್ತಮ ಕೂಟ

ಮಾನವನು ಸೃಷ್ಟಿಶ್ರೇಷ್ಠ ಯಾಕಾಗಿದ್ದಾನೆ ಮತ್ತು ಜಗತ್ತಿಗೆ ಅವನನ್ನು ಯಾಕಾಗಿ ಕಳುಹಿಸಲಾಗಿದೆ ಎಂಬುದು ನಿಮಗೆ ಗೊತ್ತೇ? ಸಂಕ್ಷಿಪ್ತವಾಗಿ ಹೇಳಬೇಕಾದರೆ, ಸಕಲ ವಿಶ್ವವು ಅಲ್ಲಾಹನ ಆದೇಶಗಳನ್ನು ಪಾಲಿಸುತ್ತಿದೆ. ಮಾನವನೂ ತನ್ನ ಸೃಷ್ಟಿಕರ್ತ ಪಾಲಕ ಪ್ರಭುವಿನ ಇಚ್ಛೆಗೆ ತಕ್ಕಂತೆ ಬಾಳುತ್ತಾ ದೇವನನ್ನು ಅನುಸರಿಸುವಂತೆ ಇಹಲೋಕವನ್ನು ಮಾರ್ಪಡಿಸಲು ಪ್ರಯತ್ನಿಸಬೇಕಾಗಿದೆ. ಅಲ್ಲಾಹನು ಈ ಲೋಕವನ್ನು ಸೃಷ್ಟಿಸಿರುವನು. ನಾವು ಅವನ ಆದೇಶಗಳಂತೆ ಬಾಳಬೇಕಾಗಿದೆ. ಇನ್ನು ಜಗತ್ತಿನವರಿಗೆ ಸತ್ಯ ಮಾರ್ಗ ವನ್ನು ತೋರಿಸಲು ಪ್ರವಾದಿಗಳು ಬರಲಾರರು. ಆದ್ದರಿಂದ ಅಲ್ಲಾಹನು ನಮ್ಮ ಮೇಲೆ ಈ ಹೊಣೆಗಾರಿಕೆಗಳನ್ನು ನೀಡಿರುವನು. ಪವಿತ್ರ ಕುರ್‌ಆನಿನಲ್ಲಿ ಹೀಗೆ ಹೇಳಲಾಗಿದೆ,

كُنْتُمْ خَيْرَ أُمَّةٍ أُخْرِجَتْ لِلنَّاسِ تَأْمُرُونَ بِالْمَعْرُوفِ
وَتَنْهَوْنَ عَنِ الْمُنْكَرِ وَتُؤْمِنُونَ بِاللَّهِ

"ಮಾನವರ ಸನ್ಮಾರ್ಗದರ್ಶನ ಮತ್ತು ಸಂಸ್ಕಾರಗಳಿಗಾಗಿ ನಿಯೋಗಿಸಲಾಗಿರುವ ಅತ್ಯುತ್ತಮ ಜನಕೂಟವು ನಿಮ್ಮದಾಗಿರುತ್ತದೆ. ನೀವು ಒಳಿತಿನ ಆದೇಶ ವನ್ನೀಯುತ್ತೀರಿ, ಪಾಪಕಾರ್ಯಗಳಿಂದ ತಡೆಯುತ್ತೀರಿ ಮತ್ತು ಅಲ್ಲಾಹನ ಮೇಲೆ ವಿಶ್ವಾಸವಿಡುತ್ತೀರಿ."

**(ಆಲಿ ಇಮ್ರಾನ್: 110)**

ಈ ವಚನದಲ್ಲಿ ಮುಸ್ಲಿಮರ ಅತಿ ದೊಡ್ಡ ಮತ್ತು ಮಹಾನ್ ಹೊಣೆಗಾರಿಕೆಯನ್ನು ತಿಳಿಸಲಾಗಿದೆ. ಪವಿತ್ರ ಕುರ್‌ಆನಿನ ಇತರ ಕಡೆಗಳಲ್ಲಿಯೂ ನಮ್ಮನ್ನು ಇನ್ನೂ ಭವ್ಯವಾದ ಬಿರುದುಗಳಿಂದ ಅಭಿಸಂಬೋಧಿಸಲಾಗಿದೆ. ಅವುಗಳ ಬೆಳಕಿನಲ್ಲಿ ಈಗ ನಾವು ಜಗತ್ತಿನ ಅತ್ಯುತ್ತಮ ಜನಕೂಟವಾಗಿದ್ದೇವೆ; ಅಲ್ಲಾಹನ ಕಡೆಗೆ ಕರೆ ಕೊಡುವ ಸಂದೇಶ ಪ್ರಚಾರಕರಾಗಿದ್ದೇವೆ; ಅತಿರೇಕ ಗೊಂದಲಗಳಲ್ಲಿ ಬೀಳದೆ ಸಮತೋಲನದೊಂದಿಗೆ ಹೊಣೆಗಾರಿಕೆಗಳನ್ನು ನಿಭಾಯಿಸುವ ಸಂತುಲಿತ ಸಮುದಾಯವಾಗಿದ್ದೇವೆ. ಬನ್ನಿ, ನಾವೀಗ ಆ ಪ್ರಮುಖ ಹೊಣೆಗಾರಿಕೆಗಳ ಬೇಡಿಕೆಗಳನ್ನು ಅರಿಯೋಣ.

## 1. ಅಲ್ಲಾಹನ ಮೇಲೆ ಅಪಾರ ಪ್ರೀತಿ

ಎಲ್ಲಕ್ಕಿಂತ ಮಿಗಿಲಾಗಿ ಅಲ್ಲಾಹನನ್ನು ಪ್ರೀತಿಸಬೇಕು ಎಂಬುದು ವಿಶ್ವಾಸದ ಬೇಡಿಕೆಯಾಗಿದೆ. ಒಮ್ಮೆ ಆಲೋಚಿಸಿ ನೋಡಿ. ಪ್ರೀತಿಯ ಬೇಡಿಕೆಯನ್ನು ಯಾಕಿಡಲಾಗಿದೆ? ಸಂಪತ್ತು ಅಥವಾ ಕರ್ಮಗಳ ಬೇಡಿಕೆಗಳನ್ನೇಕೆ ಇಡಲಾಗಿಲ್ಲ? ಅದಕ್ಕೆ ಕಾರಣವೇನೆಂದರೆ, ಪ್ರತಿಯೊಂದು ಕರ್ಮಕ್ಕೂ ಒಂದು ಚಾಲಕ ಶಕ್ತಿ ಇರುತ್ತದೆ. ಅವುಗಳ ಪೈಕಿ ಪ್ರೀತಿಯೇ ಬಲವಾದ ಚಾಲಕ ಶಕ್ತಿಯಾಗಿದೆ. ವಿಷಯವು ಸತ್ಕರ್ಮವಾಗಲಿ ಅಥವಾ ದುಷ್ಕರ್ಮವಾಗಲಿ, ಪ್ರತಿಯೊಂದಕ್ಕೂ ಯಾರದಾದರೂ ಪ್ರೀತಿಯೇ ಚಾಲಕ ಶಕ್ತಿಯಾಗಿರುತ್ತದೆ. ಮಾತಾಪಿತರ ತ್ಯಾಗ-ಬಲಿದಾನವು ಮಕ್ಕಳ ಮೇಲಿನ ಪ್ರೀತಿಯ ಕಾರಣದಿಂದಾಗಿರುತ್ತದೆ. ರೈತನು ತನ್ನ ಫಸಲಿನ ಮೇಲ್ನೋಟವನ್ನು ತನ್ನ ಹೊಲ-ಗದ್ದೆಯ ಮೇಲಿನ ಪ್ರೀತಿಯಿಂದ ಮಾಡುತ್ತಾನೆ. ವರ್ತಕನ ವ್ಯಾಪಾರದ ಮೇಲಿರುವ ಒಲವು ಕೂಡ ಸಂಪತ್ತಿನ ಪ್ರೀತಿಯಿಂದಾಗಿರುತ್ತದೆ. ಹೀಗೆ ಗಮನಿಸುತ್ತಾ ಹೋದರೆ, ವಾಹನ ಓಡಲು ತೈಲವು ಚಾಲಕ ಶಕ್ತಿಯಾಗಿರುವಂತೆಯೇ ಪ್ರತಿಯೊಂದು ಕರ್ಮದ ಹಿಂದಿನ ಚಾಲಕ ಶಕ್ತಿಯು ಯಾವುದಾದರೂ ಪ್ರೀತಿಯಾಗಿದೆ ಎಂದು ತಿಳಿದು ಬರುತ್ತದೆ.

ಸತ್ಕರ್ಮಗಳನ್ನೆಸಗಲು ಅಲ್ಲಾಹನ ಮೇಲಿನ ಪ್ರೀತಿಯೇ ಮೂಲ ಬೇಡಿಕೆ ಮತ್ತು ಉದ್ದೇಶವಾಗಿರಬೇಕು. ಆ ದಯಾಮಯ ಪ್ರಭುವಿಗೆ ತನ್ನ ದಾಸರ ಮೇಲಿರುವ ಪ್ರೀತಿಗೆ ಎಣೆಯಿಲ್ಲ. ಅಲ್ಲಾಹನ ಅನೇಕ ಗುಣವಿಶೇಷಗಳು ಅವನ ಅಪಾರ ಪ್ರೀತಿಯ ಯಾವುದಾದರೂ ಒಂದು ಮಗ್ಗುಲನ್ನು ಸ್ಪಷ್ಟಪಡಿಸುತ್ತದೆ. ಅರ್ರಹ್ಮಾನ್, ಅರ್ರಹೀಮ್, ಅಲ್ ವದೂದ್, ಅಲ್ ಗಫೂರ್, ಅಲ್ ಗಫ್ಫಾರ್, ಅಸ್ಸತ್ತಾರ್, ಅರ್ರಝ್ಝಾಕ್, ಅಸ್ಸಲಾಮ್, ಅಲ್ ಕರೀಮ್, ಅಲ್ ಮುಗ್‌ನೀ, ಅಲ್ ಮುಹೈಮಿನ್, ಅಲ್ ಖಾಲಿಕ್, ಅಲ್ ಬರ್ರ್, ಅಲ್ ಮುಜೀಬ್, ಅಲ್ ಖಬೀರ್ ಇತ್ಯಾದಿ. ಕೊಂಚ ಗಮನಿಸಿ ನೋಡಿದರೆ, ಇಡೀ ಪ್ರಪಂಚವು ಅಲ್ಲಾಹನ ದಯೆ-ಕರುಣೆಯ ಜೀವಂತ ಚಿತ್ರಣವಾಗಿ ಗೋಚರಿಸುವುದು. ಎಲ್ಲೆಡೆ ಅವನದೇ ಸಾಮರ್ಥ್ಯದ ದರ್ಶನಗಳಿವೆ. ಪ್ರಪಂಚದ ಪ್ರತಿಯೊಂದು ಕಡೆಯೂ ಪಾಲಕ ಪ್ರಭುವಿನ ಸೃಷ್ಟಿ ನೈಪುಣ್ಯವು ಎದ್ದು ಕಾಣಿಸುತ್ತದೆ. ಅಲ್ಲದೆ ಮಾನವರು, ಪ್ರಾಣಿಗಳು ಮತ್ತಿತರ ಜೀವಿಗಳ ಮೇಲೆ ಅವನ ದಯೆ ಹಾಗೂ ಸಮೃದ್ಧಿಯು ವರ್ಷಿಸುತ್ತಿರುತ್ತದೆ. ಅಲ್ಲಾಹನ ಕೊಡುಗೆಗಳು ಎಷ್ಟಿವೆ ಎಂದರೆ ಅವುಗಳನ್ನು ಎಣಿಸುವುದೇ ಕಷ್ಟ.

وَإِن تَعُدُّوا نِعْمَتَ اللَّهِ لَا تُحْصُوهَا

ನೀವು ಅಲ್ಲಾಹನ ಕೊಡುಗೆಗಳನ್ನು ಎಣಿಕೆ ಮಾಡಲಿಚ್ಛಿಸಿದರೆ, ಮಾಡಲಾರಿರಿ.

(ಇಬ್‌ರಾಹೀಮ್: 34)

ನಿಶ್ಚಯವಾಗಿಯೂ ತನ್ನ ಸೃಷ್ಟಿಗಳ ಮೇಲೆ ಅಸೀಮವಾದ ದಯೆ-ಕರುಣೆ ಹೊಂದಿರುವ ಪಾಲಕ ಪ್ರಭುವನ್ನು ಅಪಾರವಾಗಿ ಪ್ರೀತಿಸಬೇಕಾಗಿದೆ. ಅವನ ಮೇಲಿನ ಪ್ರೀತಿಯ ಆಧಾರದಲ್ಲಿಯೇ ಜೀವನ ಸಾಗಬೇಕಾಗಿದೆ. ಹೀಗೆ ಅಲ್ಲಾಹನನ್ನು ಅಪಾರವಾಗಿ ಪ್ರೀತಿಸುವವರು...

- ಎಲ್ಲ ಸ್ಥಿತಿಯಲ್ಲೂ ಸತ್ಕರ್ಮಗಳನ್ನೆಸಗುವವರು.
- ನಿಸ್ವಾರ್ಥವಾಗಿ ಮಾನವರ ಸೇವೆಯಲ್ಲಿ ತೊಡಗಿಕೊಳ್ಳುವರು.
- ಯಾರಿಂದಲೂ ಪ್ರತಿಫಲ ಮತ್ತು ಕೃತಜ್ಞತೆಯನ್ನು ನಿರೀಕ್ಷಿಸಲಾರರು.
- ರಾತ್ರಿಯ ಅಂತಿಮ ಜಾವಗಳಲ್ಲಿ ಪ್ರಭುವಿನ ಸನ್ನಿಧಿಯಲ್ಲಿ ಎದ್ದು ನಿಲ್ಲುವರು.
- ಯಾರದೇ ಹಕ್ಕು ಚ್ಯುತಿ ಉಂಟು ಮಾಡಲಾರರು.
- ಅಮಾನತ್ ಮತ್ತು ಪ್ರಾಮಾಣಿಕತೆಯು ಅವರ ವಿಶೇಷ ಗುಣವಾಗಿರುವುದು.
- ಇತರರ ತಪ್ಪುಗಳನ್ನು ಮನ್ನಿಸುವವರು.

• ತಮ್ಮ ಬಳಿ ಇರುವುದರ ಬದಲು ಅಲ್ಲಾಹನ ಬಳಿ ಇರುವುದರ ಮೇಲೆ ಭರವಸೆ ಇರಿಸುವರು.

• ತಮ್ಮ ಪ್ರತಿಯೊಂದು ಕರ್ಮವನ್ನೂ ತುಚ್ಛವಾಗಿ ಗಣಿಸುವರು ಮತ್ತು ಅವರ ಪ್ರತಿಯೊಂದು ಕರ್ಮವೂ ಇನ್ನಷ್ಟು ಸತ್ಕರ್ಮಗಳನ್ನೆಸಗಲು ಪ್ರೇರಣೆಯಾಗುವುದು.

• ಧರ್ಮದ ಸೇವೆಗಾಗಿ ತಮ್ಮ ಸರ್ವಸ್ವವನ್ನೂ ತೊಡಗಿಸಿಕೊಳ್ಳುವರು.

## 2. ಎಲ್ಲ ಸ್ಥಿತಿಯಲ್ಲೂ ಸತ್ಕರ್ಮ

ಪ್ರೀತಿಯ ಹೊರತು ಈಮಾನ್ (ವಿಶ್ವಾಸ) ಪೂರ್ಣವಾಗುವುದಿಲ್ಲ ಮತ್ತು ಕರ್ಮದ ಹೊರತು ವಿಶ್ವಾಸದ ವಾಸ್ತವಿಕತೆಯು ತಿಳಿಯಲಾರದು; ಅಂತೆಯೇ ಅದು ಪಕ್ವವಾಗುವುದೂ ಇಲ್ಲ. ಆದ್ದರಿಂದಲೇ ಪವಿತ್ರ ಕುರ್ಆನಿನ ಹಲವು ಕಡೆಗಳಲ್ಲಿ, ಸತ್ಯವಿಶ್ವಾಸ ಸ್ವೀಕರಿಸಿದ ಮತ್ತು ಸತ್ಕರ್ಮವೆಸಗಿದ ಜನರ ಕುರಿತು ಪ್ರಸ್ತಾಪಿಸಿರುವುದನ್ನು ಕಾಣಬಹುದಾಗಿದೆ. ಜಗತ್ತಿನಲ್ಲಿ ಮಾನವರ ಒಳಿತಿಗಾಗಿ ಕಳುಹಿಸಲಾಗಿರುವ ಸಮುದಾಯದ ಪ್ರಮುಖ ಗುಣ ಎಲ್ಲ ಸ್ಥಿತಿಯಲ್ಲೂ ಸತ್ಕರ್ಮ ಎಸಗುವುದಾಗಿರಬೇಕು. ಪ್ರತಿಯೊಂದು ಕರ್ಮವು ಹೀಗೆಯೇ ಆಗಬೇಕು ಎಂದಾಗಿರಬಾರದು. ಬದಲಾಗಿ ಅದು ಎಲ್ಲ ರೀತಿಯಲ್ಲೂ ಅರ್ಥಪೂರ್ಣವಾಗಿರಬೇಕು. ಎಸಗುವ ಸತ್ಕರ್ಮಗಳಲ್ಲಿ ಈ ಕೆಳಗೆ ನೀಡಲಾಗಿರುವ ವಿಶೇಷತೆ ಇರಬೇಕಾಗಿದೆ–

**(ಅ) ನಿಶ್ಚಿತ ಸಮಯದಲ್ಲಿ ಎಸಗುವುದು:** ಅಂದರೆ ಒಂದು ಕಾರ್ಯಕ್ಕೆ ನಿಶ್ಚಯಿಸಲಾಗಿರುವ ಸಮಯದಲ್ಲಿಯೇ ಅದನ್ನು ಮಾಡಿ ಮುಗಿಸಬೇಕು. ಐದು ಹೊತ್ತಿನ ನಮಾಝ್‌ಗಳನ್ನು ನಿಶ್ಚಿತ ಸಮಯದಲ್ಲಿ ಕಡ್ಡಾಯಗೊಳಿಸಲಾಗಿದೆ. ಆದ್ದರಿಂದ ಪ್ರತಿಯೊಂದು ನಮಾಝನ್ನೂ ಅದರ ನಿಶ್ಚಿತ ಸಮಯದಲ್ಲಿ ನಿರ್ವಹಿಸಬೇಕಾಗಿದೆ. ಅಲ್ಲಾಹನ ಸಂದೇಶವಾಹಕರಲ್ಲಿ(ಸ), ಯಾವ ಕರ್ಮವು ಅಲ್ಲಾಹನಿಗೆ ಅತ್ಯಂತ ಪ್ರಿಯವಾಗಿರುವುದು? ಎಂದು ಕೇಳಲಾದಾಗ, ನಮಾಝನ್ನು ಅದರ ಸಮಯದಲ್ಲಿ ನಿರ್ವಹಿಸುವುದು ಎಂದು ಅವರು(ಸ) ಉತ್ತರಿಸಿದ್ದರು. ಆದ್ದರಿಂದ ನಿಮ್ಮ ಪ್ರತಿಯೊಂದು ಕಾರ್ಯವನ್ನೂ ಅದರ ಸಮಯದಲ್ಲಿ ಮಾಡುವ ಗುಣವನ್ನು ಬೆಳೆಸಿಕೊಳ್ಳಬೇಕು. ಅದೇ ರೀತಿ ಇತರ ಕಡ್ಡಾಯ ಕರ್ಮಗಳಾದ ಉಪವಾಸ ವ್ರತ, ಝಕಾತ್ ಮತ್ತು ಹಜ್ಜ್‌ಗಳಿಗೂ ಅವುಗಳದೇ ಆದ ನಿಶ್ಚಿತ ಸಮಯವಿದೆ. ಅವೆಲ್ಲವುಗಳನ್ನೂ ಅವುಗಳ ಸಮಯದಲ್ಲಿಯೇ ನಿರ್ವಹಿಸಲು ಪ್ರಯತ್ನಿಸಬೇಕು. ಸಮಯ ಮೀರಿದ ಮೇಲೆ ಎಷ್ಟೇ ಉತ್ತಮ ರೀತಿಯಲ್ಲಿ ನಿರ್ವಹಿಸಿದರೂ ಅಲ್ಲಾಹ್ ಅದಕ್ಕೆ ಅಷ್ಟೇನೂ ಮಹತ್ವವನ್ನು ನೀಡುವುದಿಲ್ಲ. ಈ ನಿಟ್ಟಿನಲ್ಲಿ

ಪವಿತ್ರ ಕುರ್‌ಆನಿನಲ್ಲಿ ಏನು ಹೇಳಲಾಗಿದೆ ಎಂಬುದನ್ನು ನೋಡೋಣ. ನಮಾಝನ್ನು ಮುಂದೂಡುವ ಜನರಿಗೆ ಎಚ್ಚರಿಕೆ ನೀಡುತ್ತಾ ಹೇಳಲಾಯಿತು,

فَوَيْلٌ لِّلْمُصَلِّينَ ۝ الَّذِينَ هُمْ عَن صَلَاتِهِمْ سَاهُونَ ۝

"ಮತ್ತು ವಿನಾಶ ಕಾದಿದೆ ಆ ನಮಾಝ್ ನಿರ್ವಹಿಸುವವರಿಗೆ; ಅವರು ತಮ್ಮ ನಮಾಝ್‌ನ ಬಗ್ಗೆ ಅನಾಸ್ಥೆ ತೋರುತ್ತಾರೆ." (ಅಲ್ ಮಾಊನ್: 4-5)

ಅಂತೆಯೇ ಝಕಾತ್ ನೀಡದವರಿಗೆ ಅತ್ಯಂತ ಕಠೋರವಾದ ಶಿಕ್ಷೆಯ ಸುವಾರ್ತೆಯನ್ನು ನೀಡಲಾಗಿದೆ,

وَالَّذِينَ يَكْنِزُونَ الذَّهَبَ وَالْفِضَّةَ وَلَا يُنفِقُونَهَا فِي سَبِيلِ اللَّهِ فَبَشِّرْهُم بِعَذَابٍ أَلِيمٍ ۝

"ಚಿನ್ನ ಮತ್ತು ಬೆಳ್ಳಿಯನ್ನು ಸಂಗ್ರಹಿಸಿಟ್ಟು ಅವುಗಳನ್ನು ದೇವಮಾರ್ಗದಲ್ಲಿ ಖರ್ಚು ಮಾಡದವರಿಗೆ ವೇದನಾಯುಕ್ತ ಯಾತನೆಯ ಸುವಾರ್ತೆ ನೀಡಿರಿ." (ಅತ್ತೌಬ: 34)

ಒಟ್ಟಿನಲ್ಲಿ, ಜಗತ್ತಿನವರ ಮಾರ್ಗದರ್ಶನದ ಉನ್ನತ ಹೊಣೆಗಾರಿಕೆಯನ್ನು ಅಲ್ಲಾಹನು ನಮ್ಮ ಮೇಲಿರಿಸಿರುವನು; ಅದರಲ್ಲಿ ಯಶಸ್ಸು ಸತ್ಕರ್ಮಗಳನ್ನು ಎಸಗುತ್ತಿರುವುದರಿಂದ ಮಾತ್ರವೇ ಸಾಧ್ಯವಾಗುವುದು. ಹಾಗಾಗಿ ಕಡ್ಡಾಯ ಮತ್ತು ಐಚ್ಛಿಕ ಕರ್ಮಗಳ ಜತೆಗೆ ಇನ್ನೂ ಅನೇಕ ರೀತಿಯ ಸತ್ಕರ್ಮಗಳನ್ನು ಎಸಗುವುದನ್ನು ನಿಮ್ಮ ವ್ಯಕ್ತಿತ್ವದ ಗುರುತನ್ನಾಗಿ ಮಾಡಬೇಕು. ಗಳಿಸುವ ವಿದ್ಯೆಯನ್ನು ಕಾರ್ಯರೂಪಕ್ಕೆ ತರುವಲ್ಲಿ ನಿಪುಣರಾಗಬೇಕು.

**(ಆ) ನಿರಂತರ ಕರ್ಮವೆಸಗುವುದು:** ಅಲ್ಲಾಹನು ನಿಶ್ಚಿತ ಸಮಯದಲ್ಲಿ ಎಸಗುವ ಕರ್ಮವನ್ನು ಇಷ್ಟಪಡುವುದು ಮಾತ್ರವಲ್ಲ, ನಿರಂತರವಾಗಿ ಎಸಗುವ ಕರ್ಮಗಳನ್ನೂ ಇಷ್ಟಪಡುತ್ತಾನೆ. ನೀವು ತಹಜ್ಜುದ್ ನಮಾಝನ್ನು ನಿರ್ವಹಿಸುತ್ತೀರಿ ಎಂದಾದರೆ, ಅದನ್ನು ಸಾದ್ಯಂತ ಪಾಲಿಸುತ್ತಲಿರಿ. ದಾನ-ಧರ್ಮಗಳನ್ನು ನಿರಂತರವಾಗಿ ನೀಡುತ್ತಿರಲು ಪ್ರಯತ್ನಿಸಿರಿ. ಅಸಹಾಯಕರಿಗೆ ಮಾಡುವ ಸಹಾಯವನ್ನು ಜಾರಿಯಲ್ಲಿರಿಸಿರಿ. ಅಲ್ಲಾಹನನ್ನು ಸ್ಮರಿಸುವ ಕರ್ಮವನ್ನು ನಿರಂತರವಾಗಿರಿಸಿರಿ. ದಿನನಿತ್ಯ ಪಠಿಸುವ ಪವಿತ್ರ ಕುರ್‌ಆನನ್ನು ನಿಮ್ಮ ನಿತ್ಯ ಕರ್ಮವನ್ನಾಗಿ ಮಾಡಿರಿ. ಅಲ್ಲಾಹನ ಸಂದೇಶವಾಹಕರು(ಸ) ಹೀಗೆ ಹೇಳಿರುವುದಾಗಿ ಆಯಿಶಾ(ರ) ವರದಿ ಮಾಡಿದ್ದಾರೆ, ಅಲ್ಲಾಹನಿಗೆ ನಿರಂತರವಾಗಿ

ಎಸಗುವ ಕರ್ಮವು ಬಹಳ ಇಷ್ಟ, ಅದು ಸಣ್ಣ ಮಟ್ಟಿನದ್ದಾದರೂ ಸರಿ.

**(ಇ) ವಿಳಂಬ ಮಾಡದೆ ಕರ್ಮವೆಸಗುವುದು:** ಕೆಲವು ಕರ್ಮಗಳನ್ನು ಆದಷ್ಟು ಬೇಗ ಮಾಡಿ ಮುಗಿಸಬೇಕಾಗುತ್ತದೆ. ಉದಾ: ಕಡ್ಡಾಯ ನಮಾಝ್‌ಗಳನ್ನು ಸಮಯಕ್ಕೆ ಸರಿಯಾಗಿ ನಿರ್ವಹಿಸಬೇಕಾಗಿದೆ. ವಿಳಂಬವಾಗಿ ನಿರ್ವಹಿಸಲಾಗುವ ನಮಾಝ್ ಅಲ್ಲಾಹನಿಗೆ ಇಷ್ಟವಿಲ್ಲ. ಕುರ್‌ಆನ್ ಮತ್ತು ಹದೀಸ್‌ನ ಆದೇಶವು ತಿಳಿದ ಕೂಡಲೇ ಅದನ್ನು ಪಾಲಿಸಲು ಪ್ರಯತ್ನಿಸಬೇಕು. ಮಾತಾಪಿತರು ಅಥವಾ ಹಿರಿಯರು ಉಪದೇಶ ನೀಡಿದರೆ, ಅದಕ್ಕೆ ತಕ್ಷಣದ ಪರಿಗಣನೆಯನ್ನು ನೀಡಬೇಕು. ಕೆಲವು ವಿಷಯಗಳಲ್ಲಿ ವಿಳಂಬ ಮಾಡದೆ ಸಹಾಯ ಮಾಡುವುದು ಅತ್ಯಗತ್ಯ ವಾಗಿರುತ್ತದೆ. ಅಂದರೆ ರೋಗಿಗೆ ತಕ್ಷಣ ಸಹಾಯ ಮಾಡುವುದು. ಒಂದು ವೇಳೆ ಸಹಾಯ ಮಾಡುವುದರಲ್ಲಿ ವಿಳಂಬವಾದರೆ, ರೋಗಿಗೆ ಇನ್ನಷ್ಟು ನಷ್ಟ ಉಂಟಾಗುವ ಸಾಧ್ಯತೆಯೂ ಇದೆ.

ಏನಿದ್ದರೂ ಕರ್ಮಗಳಿಗೆ ಸಂಬಂಧಿಸಿ, ವಿಳಂಬಿಸದೆ ಎಸಗುವುದು ಬಹಳ ಪ್ರಮುಖವಾದ ಸಂಗತಿಯಾಗಿದೆ. ಸಹಾಬಿಗಳ(ರ) ಗುಣ ಇದುವೇ ಆಗಿತ್ತು. ಅಂದರೆ ಅವರಿಗೆ ಏನಾದರೂ ಆದೇಶ ನೀಡಲಾದರೆ ಅಥವಾ ಉತ್ತಮ ವಿಷಯ ತಿಳಿದು ಬಂದರೆ ತಕ್ಷಣ ಅದನ್ನು ಪಾಲಿಸುತ್ತಿದ್ದರು.

ಉಹುದ್ ಯುದ್ಧದ ಸಂದರ್ಭದಲ್ಲಿ ಓರ್ವ ವ್ಯಕ್ತಿ ಬಂದು ಅಲ್ಲಾಹನ ಸಂದೇಶವಾಹಕರಲ್ಲಿ(ಸ) ಕೇಳಿದರು, ಯಾ ರಸೂಲಲ್ಲಾಹ್(ಸ)! ನಾನು ಯುದ್ಧದಲ್ಲಿ ಮಡಿದರೆ ಎಲ್ಲಿಗೆ ಹೋಗುವೆನು? ಪ್ರವಾದಿವರ್ಯರು, ಸ್ವರ್ಗಕ್ಕೆ ಹೋಗುವೆ ಎಂದರು. ಅಷ್ಟು ಕೇಳಿದ್ದೇ ತಡ, ಖರ್ಜೂರ ತಿನ್ನುತ್ತಿದ್ದ ಆ ವ್ಯಕ್ತಿ ಅದನ್ನು ಎಸೆದು ರಣರಂಗಕ್ಕೆ ಧುಮುಕಿದರು. ವೀರಾವೇಶದಿಂದ ಹೋರಾಡಿ ಹುತಾತ್ಮರಾದರು.

[ವರದಿ: ಹ. ಜಾಬಿರ್(ರ) - ಬುಖಾರಿ, ಮುಸ್ಲಿಮ್]

ಒಮ್ಮೆ ಅಲ್ಲಾಹನ ಸಂದೇಶವಾಹಕರು(ಸ) ಹೇಳಿದರು, "ಜನಾಬತ್ ಸ್ನಾನದಲ್ಲಿ ಒಂದು ಕೂದಲಿನಷ್ಟು ದೇಹದ ಭಾಗವು ಒದ್ದೆಯಾಗದೆ ಉಳಿದರೆ ಅಲ್ಲಾಹನು ಇಂತಿಂತಹ ಯಾತನೆ ನೀಡುವನು." ಅದರ ನಂತರ ಹ. ಅಲೀಯವರು(ರ) ಒಮ್ಮೆಯೂ ತಲೆಗೂದಲು ಬೆಳೆಯಲು ಬಿಟ್ಟಿರಲಿಲ್ಲ, ಸ್ವಲ್ಪ ಬೆಳೆದಾಗಲೇ ಬೋಳಿಸು ತ್ತಿದ್ದರು. ಅಲೀ(ರ) ಹೇಳುತ್ತಾರೆ, "ನನ್ನ ತಲೆಯೊಂದಿಗೆ ನಾನು ವೈರ ಕಟ್ಟಿಕೊಂಡೆ."

(ಅಬೂದಾವೂದ್)

ಒಟ್ಟಿನಲ್ಲಿ ನಿಮ್ಮ ಜೀವನವು ಸತ್ಕರ್ಮಗಳಿಂದ ಕಂಗೊಳಿಸುತ್ತಿರುವುದರ ಜತೆಗೇ

ವಿಳಂಬವಿಲ್ಲದೆ ಕರ್ಮವೆಸಗುವ ಹುಮ್ಮಸ್ಸೂ ನಿಮ್ಮಲ್ಲಿ ಬೆಳೆದು ಬರಬೇಕು.

**(ಈ) ಸತ್ಕರ್ಮಗಳಲ್ಲಿ ಪರಸ್ಪರ ಪೈಪೋಟಿಗೆ ಪ್ರಯತ್ನ:** ಅಂದರೆ ಎಲ್ಲರೂ ಸತ್ಕರ್ಮವೆಸಗಲು ತೊಡಗಿಕೊಂಡರೆ, ನಂತರ ಪ್ರತಿಯೊಬ್ಬರೂ ಇತರರಿಗಿಂತ ಹೆಚ್ಚೆಚ್ಚು ಕರ್ಮವೆಸಗಲು ಪ್ರಯತ್ನಿಸುವ ಕಾಲ ಬರುವುದು. ಇದೆಲ್ಲವೂ ಅಲ್ಲಾಹನ ಸಂಪ್ರೀತಿಗಾಗಿರುವುದು. ಓಟದ ಸ್ಪರ್ಧೆಯು ಮೈದಾನಕ್ಕೆ ಇಳಿಯುವ ಜನರ ನಡುವೆ ನಡೆಯುತ್ತದೆ ಮತ್ತು ಓಟದ ಟ್ರಾಕ್‌ನಲ್ಲಿ ಅದು ನಡೆಯುತ್ತದೆ ಎಂಬುದು ನಿಮಗೆ ತಿಳಿದಿದೆ ತಾನೇ?

ಮೈದಾನದಲ್ಲಿ ಆ ಸಂದರ್ಭ ಇತರ ಜನರೂ ಇರುವರು; ಆದರೆ ಅವರು ಓಟದ ಸ್ಪರ್ಧೆಯಲ್ಲಿ ಭಾಗಿಯಾಗಿರುವುದಿಲ್ಲ. ಹಾಗಾಗಿ ಸಮಾಜದಲ್ಲಿ ಮುಸ್ಲಿಮರಿದ್ದು, ಅವರಿಗೆ ಎಲ್ಲ ಸಂದರ್ಭದಲ್ಲೂ ಸತ್ಕರ್ಮವೆಸಗಲು ಅಲ್ಲಾಹ್ ಉಪದೇಶಿಸಿರುವಾಗ, ಅವರ ನಡುವೆ ಸ್ಪರ್ಧಾತ್ಮಕತೆಯು ಬೆಳೆದು ಬರಬೇಕಾದುದು ಅನಿವಾರ್ಯವಾಗಿದೆ. ವಾಸ್ತವದಲ್ಲಿ, ಸಮಾಜದ ಸುಧಾರಣೆ ಮತ್ತು ಪ್ರಗತಿ ಹಾಗೂ ನಿರ್ಮಾಣವು ನಮ್ಮ ಈ ಸ್ಪರ್ಧಾತ್ಮಕ ಗುಣದೊಂದಿಗೆ ಸೇರಿಕೊಂಡಿರುತ್ತದೆ. ಅಲ್ಲಾಹನ ವಿಶೇಷವಾದ ಆಜ್ಞೆ ಈ ರೀತಿ ಇದೆ,

وَلِكُلٍّ وِّجْهَةٌ هُوَ مُوَلِّيهَا فَاسْتَبِقُوا الْخَيْرَاتِ ۚ
أَيْنَ مَا تَكُونُوا يَأْتِ بِكُمُ اللَّهُ جَمِيعًا ۚ إِنَّ اللَّهَ عَلَىٰ كُلِّ شَيْءٍ قَدِيرٌ ﴿١٤٨﴾

"ಪ್ರತಿಯೊಬ್ಬನಿಗೂ ಅವನು ಮುಖ ಮಾಡುವ ದಿಕ್ಕೊಂದಿದೆ. ನೀವಂತೂ ಸತ್ಕರ್ಮಗಳ ದಿಕ್ಕಿಗೆ ಮುನ್ನಡೆಯಿರಿ. ನೀವೆಲ್ಲಿದ್ದರೂ ಅಲ್ಲಾಹ್ ನಿಮ್ಮೆಲ್ಲರನ್ನೂ ಮರಳಿ ತರುವನು. ಅವನ ಅಧಿಕಾರ ವ್ಯಾಪ್ತಿಯಿಂದ ಯಾವುದೂ ಹೊರಗಿಲ್ಲ." **(ಅಲ್ ಬಕರ: 148)**

ಸಹಾಬಿಗಳ ನಡುವೆ ಇಂತಹುದೇ ಸ್ಪರ್ಧಾತ್ಮಕ ಮನೋಭಾವವಿತ್ತು. ಉಮರ್(ರ)ರಿಗೆ ಸತ್ಕರ್ಮಗಳಲ್ಲಿ ಅಬೂಬಕರ್(ರ)ರಿಗಿಂತಲೂ ಮುಂದುವರಿಯಬೇಕು ಎಂಬ ಆಗ್ರಹವಿತ್ತು. ಹಾಗಾಗಿ ಯುದ್ಧವೊಂದರ ವೇಳೆಯಲ್ಲಿ ಉಮರ್(ರ)ರವರು ತಮ್ಮಲ್ಲಿರುವ ಸಂಪತ್ತನ್ನು ಇಬ್ಭಾಗ ಮಾಡಿ ಒಂದು ಭಾಗವನ್ನು ಮನೆಯವರಿಗೆ ಮೀಸಲಿಟ್ಟು ಇನ್ನೊಂದು ಭಾಗವನ್ನು ಅಲ್ಲಾಹನ ಸಂದೇಶವಾಹಕರ(ಸ) ಸನ್ನಿಧಿಯಲ್ಲಿ ತಂದು ಅರ್ಪಿಸಿದರು. ಇತ್ತ ಅಬೂಬಕರ್ ಸಿದ್ದೀಕ್(ರ)ರವರು ತಮ್ಮ ಸಂಪತ್ತೆಲ್ಲವನ್ನೂ ತಂದು ಸಮರ್ಪಿಸಿದರು.

ಮನೆಯಲ್ಲಿ ಏನು ಉಳಿದಿದೆ ಎಂದು ಕೇಳಲಾದಾಗ, "ಮನೆಯಲ್ಲಿ ಅಲ್ಲಾಹ್ ಮತ್ತು ರಸೂಲರಿದ್ದಾರೆ" ಎಂದುತ್ತರಿಸಿದ್ದರು.

ಹೀಗೆ ಪ್ರತಿಯೋರ್ವರ ಅಲ್ಲಾಹನಿಗಾಗಿ ಪರಸ್ಪರ ಪೈಪೋಟಿ ನಡೆಸುವಂತಹ ದೃಶ್ಯವು ಎಲ್ಲೆಡೆ ಗೋಚರಿಸುವಂತಾಗಬೇಕು. ಒಬ್ಬನು ವಿಧವೆಯೊಬ್ಬಳಿಗೆ ಸಹಾಯ ಮಾಡಿದರೆ, ಇನ್ನೊಬ್ಬನು ಇಬ್ಬರು ವಿಧವೆಯರಿಗೆ ಸಹಾಯ ಮಾಡಬೇಕು. ಒಬ್ಬನು ಅನಾಥ ಮಗುವನ್ನು ಸಾಕಿದರೆ, ಇನ್ನೊಬ್ಬನು ಇಬ್ಬರು ಅನಾಥರನ್ನು ಸಾಕಲು ಮುಂದಾಗಬೇಕು. ಒಬ್ಬನು ತನ್ನ ಓರ್ವ ಮಗನನ್ನು ಕುರ್‌ಆನ್ ಹಾಫಿಝ್ ಮಾಡಿದರೆ, ಇನ್ನೊಬ್ಬನು ತನ್ನ ಇಬ್ಬರು ಮಕ್ಕಳನ್ನು ಕುರ್‌ಆನ್ ಹಾಫಿಝ್ ಮಾಡಲು ಪ್ರಯತ್ನಿಸಬೇಕು. ಯಾರಾದರೂ ತಮ್ಮ ಮಕ್ಕಳ ವಿವಾಹವನ್ನು ಸರಳವಾಗಿ ನೆರವೇರಿಸಿದರೆ, ಇತರ ಹೆತ್ತವರೂ ತಮ್ಮ ಮಕ್ಕಳ ಮದುವೆಯನ್ನು ಸರಳವಾಗಿ ನೆರವೇರಿಸಲು ಪ್ರಯತ್ನಿಸಬೇಕು. ಯಾರದಾದರೂ ಮನೆಯಲ್ಲಿ ಹೆಣ್ಮಕ್ಕಳೊಡನೆ ಸದ್ವರ್ತನೆ ತೋರುತ್ತಾರೆ ಎಂದು ತಿಳಿದು ಬಂದರೆ, ಇತರ ಮನೆಗಳಲ್ಲೂ ಅದರ ಅನುಕರಣೆಯಾಗಬೇಕು. ಒಬ್ಬನು ತನ್ನ ಮುಸ್ಲಿಮೇತರ ಸಹೋದರನಿಗೆ ಇಸ್ಲಾಮಿನ ಸಂದೇಶವನ್ನು ನೀಡಿದರೆ, ಇನ್ನೊಬ್ಬನು ಇಬ್ಬರು ಮುಸ್ಲಿಮೇತರ ಸಹೋದರರಿಗೆ ಇಸ್ಲಾಮಿನ ಸಂದೇಶವನ್ನು ತಲುಪಿಸಬೇಕು. ಒಬ್ಬನು ಪವಿತ್ರ ಕುರ್‌ಆನಿನ ಒಂದು ಅಧ್ಯಾಯವನ್ನು ಕಂಠಪಾಠ ಮಾಡಿದರೆ, ಇನ್ನೊಬ್ಬನು ಎರಡು ಅಧ್ಯಾಯಗಳನ್ನು ಕಂಠಪಾಠ ಮಾಡಲು ಪ್ರಯತ್ನಿಸಬೇಕು.

ಒಟ್ಟಿನಲ್ಲಿ ಸತ್ಕರ್ಮಗಳನ್ನು ಎಸಗುತ್ತಾ ಅಲ್ಲಾಹನಿಗಾಗಿ ಪೈಪೋಟಿ ನಡೆಸುವಂತಹ ವಾತಾವರಣವು ಬೆಳೆದು ಬರಬೇಕು. ಇಂತಹ ಮನೋಭಾವದಿಂದಲೇ ಒಂದು ಮಾದರಿ ಸಮಾಜವು ಅಸ್ತಿತ್ವಕ್ಕೆ ಬರಲು ಸಾಧ್ಯವಿದೆ. ಒಂದು ವೇಳೆ ಅಲ್ಲಾಹನ ಮೇಲೆ ವಿಶ್ವಾಸ ಇರಿಸುವವರು ಕರ್ಮದಲ್ಲಿ ಕೊರತೆಯನ್ನುಂಟು ಮಾಡಿದರೆ ಸಮಾಜದಲ್ಲಿ ಒಳಿತುಗಳು ಹೇಗೆ ಹರಡುವುದು ಮತ್ತು ಕೆಡುಕುಗಳು ಹೇಗೆ ದೂರವಾಗುವುದು? ಅದರಲ್ಲೂ ಸಮಾಜದಲ್ಲಿ ಒಳಿತು ಹರಡುವವರು ಕಡಿಮೆಯಿದ್ದು, ಕೆಡುಕು ವೇಗವಾಗಿ ಹರಡುತ್ತಿರುವ ಈ ಕಾಲಘಟ್ಟದಲ್ಲಿ!

## 3. ಮಾನವರೊಂದಿಗೆ ಅರ್ಥಪೂರ್ಣ ಸಂಬಂಧ

ಅಲ್ಲಾಹನ ಪ್ರೀತಿ ಇರುವಂತಹ ಹೃದಯವು, ಸತ್ಕರ್ಮಗಳ ಮೂಲಕ ಆ ಪ್ರೀತಿಯನ್ನು ಸಾಬೀತು ಪಡಿಸುತ್ತಿರುವುದು. ಯಾರ ಹೃದಯದಲ್ಲಿ ಅಲ್ಲಾಹನ ಪ್ರೀತಿ ಇರುವುದೋ ಅವನು ಮಾನವರನ್ನೂ ಪ್ರೀತಿಸುವನು; ಮತ್ತು ಮಾನವರನ್ನು ಪ್ರೀತಿಸು

ವವನು ಅವರ ಇಹ-ಪರಗಳನ್ನು ಸುಧಾರಿಸಲು ಪ್ರಯತ್ನಿಸುವನು. ಪ್ರತಿಯೊಬ್ಬ ಮಾನವನ ಅದೃಷ್ಟವು ಅವನ ಕರ್ಮಗಳನ್ನು ಅವಲಂಬಿಸಿರುತ್ತದೆ ಎಂದು ಅವನು ಅರಿಯುವನು. ಹಾಗಾಗಿ ಮಾನವ ರೊಂದಿಗಿನ ನಮ್ಮ ಸಂಬಂಧವು ಅರ್ಥಪೂರ್ಣ ಆಗಿರಬೇಕಾಗಿದೆ. ಅಲ್ಲಾಹ್ ಮತ್ತು ಆತನ ಸಂದೇಶ ವಾಹಕರ(ಸ) ಶಿಕ್ಷಣದಂತೆ ಮಾನವರ ಹಾಗೂ ಮಾನವೀಯ ಸಮಾಜದ ಸುಧಾರಣೆಯಾದರೆ, ನಿಸ್ಸಂಶಯ ವಾಗಿಯೂ ಅರ್ಥಪೂರ್ಣ ಜೀವನ ಕಾಣಲು ಸಾಧ್ಯ.

ಮಾನವೀಯತೆಯ ಈ ವಿಧಾನದಲ್ಲಿ ಸೇವಾ ಮನೋಭಾವವು ನಮ್ಮ ಹೃದಯ ದಲ್ಲಿ ಬೆಳೆದು ಬರಬೇಕಾಗಿದೆ. ಪ್ರವಾದಿವರ್ಯರು(ಸ) ಲೋಕಾನುಗ್ರಹಿಯಾಗಿ ಆಗ ತರಾಗಿದ್ದಾರೆ ಎಂಬುದನ್ನು ನಾವೆಲ್ಲ ಬಲ್ಲೆವು. ಮಾನವರ ಮೇಲೆ ಅಪಾರ ಪ್ರೀತಿ ಮತ್ತು ಹಿತಚಿಂತನೆಯು ಅವರ ಗುಣವಿಶೇಷದ ಅತ್ಯಂತ ಸುಂದರ ಮಗ್ಗುಲಾಗಿದೆ. ಕೆಲವು ಉದಾಹರಣೆಗಳನ್ನು ನೋಡೋಣ.

♦ ಅಲ್ಲಾಹನ ಸಂದೇಶವಾಹಕರು(ಸ) ಹೇಳುತ್ತಾರೆ, ಜನರೇ, ನಾನು ನಿಮ್ಮ ಬಳಿಗೆ ಕರುಣೆ ಮತ್ತು ಅಮೂಲ್ಯ ಉಡುಗೊರೆಯಾಗಿ ಕಳುಹಿಸಲ್ಪಟ್ಟಿರುವೆನು.

[ವರದಿ: ಅಬೂ ಹುರೈರಾ(ರ) - ಮುಸ್ಲಿಮ್]

♦ ಜನರೇ! ನಿಮ್ಮ ಇಹ-ಪರಗಳ ಒಳಿತಿಗಾಗಿ ನನಗಿಂತ ಉತ್ತಮ ವಸ್ತುವನ್ನು ಯಾರೂ ತಂದಿರಲಿಕ್ಕಿಲ್ಲ. ನಾನು ನಿಮಗಾಗಿ ಇಹ-ಪರಗಳ ಅನುಗ್ರಹಗಳನ್ನು ತೆಗೆದು ಕೊಂಡು ಬಂದಿದ್ದೇನೆ. ನಿಮ್ಮ ಹಣೆಗಳನ್ನು ಅಲ್ಲಾಹನ ಸನ್ನಿಧಿಯಲ್ಲಿ ಸಾಷ್ಟಾಂಗವೆರಗುವಂತೆ ಆಹ್ವಾನ ನೀಡಲು ಅವನು (ಅಲ್ಲಾಹನು) ನನ್ನನ್ನು ಕಳುಹಿಸಿರುವನು. ನಿಮ್ಮ ಹೃದಯಗಳಿಂದ ಅವನ ಹೊರತು ಮಿಥ್ಯ ಶಕ್ತಿಗಳನ್ನು ಆರಾಧಿಸುವುದರಿಂದ ತಡೆಯಲು ಕಳುಹಿಸಿರುವನು. ಹಾಗಾಗಿ ನೀವೆಲ್ಲರೂ ವಿಗ್ರಹಾರಾಧನೆ ಮತ್ತು ಬಹುದೇವ ವಿಶ್ವಾಸವನ್ನು ಬಿಟ್ಟು ಬಿಡಿರಿ. ಕೇವಲ ಅಲ್ಲಾಹನ ದಾಸ್ಯ-ಆರಾಧನೆಯನ್ನೇ ನಿಮ್ಮ ಜೀವನದ ಹೆಗ್ಗುರುತಾಗಿ ಮಾಡಿಕೊಳ್ಳಿರಿ. ನಿಮ್ಮ ಆಲೋಚನೆ ಮತ್ತು ಕರ್ಮಗಳನ್ನು ಸುಧಾರಿಸಿರಿ. ನನ್ನ ಈ ಸತ್ಯ ಸಂದೇಶಕ್ಕೆ ಓಗೊಡುವವರು ಯಾರಿದ್ದಾರೆ ಮತ್ತು ನನಗೆ ಈ ಕಾರ್ಯದಲ್ಲಿ ಸಹಾಯಕರಾಗುವವರು ಯಾರಿದ್ದಾರೆ?

♦ ನನ್ನ ಉಪಮೆಯು ಬೆಂಕಿ ಉರಿಸಿದ ವ್ಯಕ್ತಿಯಂತಿದೆ. ಬೆಂಕಿ ಪ್ರಜ್ವಲಿಸುವಾಗ ಅದರಲ್ಲಿ ಕೀಟಗಳು, ಹಾತೆಗಳು ಬಂದು ಬೀಳತೊಡಗುತ್ತವೆ ಮತ್ತು ಆ ವ್ಯಕ್ತಿಯು ಅವುಗಳನ್ನು ಬೆಂಕಿಗೆ ಬೀಳುವುದರಿಂದ ತಡೆಯುತ್ತಿರುತ್ತಾನೆ. ನೀವು ಅಲ್ಲಾಹನ ಯಾತನೆಗೆ

ಅರ್ಹರಾಗದಿರಲೆಂದು ನಾನು ನಿಮ್ಮ ಸೊಂಟ ಹಿಡಿದು ತಡೆಯುತ್ತಿದ್ದೇನೆ.

ಅಲ್ಲಾಹನ ಸಂದೇಶವಾಹಕರು(ಸ) ಮಾನವರ ಮೇಲೆ ಎಷ್ಟೊಂದು ಪ್ರೀತಿ ಮತ್ತು ಹಿತಚಿಂತನೆಯನ್ನು ಹೊಂದಿದ್ದರು! ಅಲ್ಲಾಹು ಅಕ್ಬರ್!! ಅವರು ಪ್ರತಿಯೋರ್ವ ವ್ಯಕ್ತಿಯನ್ನೂ ನರಕದ ಬೆಂಕಿಯಿಂದ ರಕ್ಷಿಸುವ ನಿಟ್ಟಿನಲ್ಲಿ ಬಹಳ ಕಾಳಜಿಯನ್ನು ವಹಿಸುತ್ತಿದ್ದರು. ಅಲ್ಲಾಹನ ದಾಸರು ಅನ್ಯರ ಮುಂದೆ ತಲೆ ಬಾಗುವುದು ಅವರಿಗೆ ಎಳ್ಳಷ್ಟೂ ಇಷ್ಟವಿರಲಿಲ್ಲ, ಜನರು ಕೆಡುಕುಗಳನ್ನು ಎಸಗುತ್ತಲೇ ಇರುವುದು ಕೂಡ ಅವರಿಗೆ ಸಹ್ಯವಾಗುತ್ತಿರಲಿಲ್ಲ. ಬದಲಾಗಿ ಇಹ-ಪರಗಳಲ್ಲಿ ಸಕಲ ಮಾನವರ ವಿಜಯವು ಅವರಿಗೆ ಪ್ರಿಯವಾಗಿತ್ತು. ಪ್ರವಾದಿವರ್ಯರ(ಸ) ಈ ಚರ್ಯೆಯು ಪ್ರತಿಯೊಬ್ಬ ಮುಸ್ಲಿಮನಿಗೂ ತನ್ನ ಹತ್ತಿರದ ಜನರೊಂದಿಗೆ ಉತ್ತಮ ಸಂಬಂಧವಿರಿಸಲು ಉಪದೇಶಿಸುತ್ತದೆ.

ಈ ಸಂಬಂಧವು, ಅದರ ಮೂಲಕ ಇಸ್ಲಾಮಿನ ಸ್ಪಷ್ಟ ಪರಿಚಯ ಮಾಡಿಸಿ ಕೊಡುವಂತಿರಬೇಕು, ಒಳಿತುಗಳು ವ್ಯಾಪಕವಾಗುವಂತೆ ಇರಬೇಕು ಮತ್ತು ಕೆಡುಕುಗಳನ್ನು ನೀಗಿಸುವಂತಿರಬೇಕು. ಅಂದರೆ ಪ್ರವಾದಿಚರ್ಯೆಯ ಬೆಳಕಿನಲ್ಲಿ ಮಾನವರೊಂದಿಗಿನ ಸಂಬಂಧದಲ್ಲಿ ಈ ನಾಲ್ಕು ಮೂಲಭೂತ ಅಂಶಗಳಿರಬೇಕು: (ಅ) ಧರ್ಮದ ಪರಿಚಯ, (ಆ) ವಿಶ್ವಾಸಾಚಾರಗಳ ಸ್ಪಷ್ಟನೆ, (ಇ) ಒಳಿತುಗಳ ವ್ಯಾಪಕತೆ ಮತ್ತು (ಈ) ಕೆಡುಕುಗಳ ನಿರ್ಮೂಲನೆ.

**(ಅ) ಧರ್ಮದ ಪರಿಚಯ:** ನಾವು ಯಾವ ಮುಸ್ಲಿಮೇತರ ಸಹೋದರರ ನಡುವೆ ಬಾಳುತ್ತಿದ್ದೇವೆಯೋ ಅವರೊಂದಿಗೆ ಸಂಬಂಧ ದೃಢಗೊಳಿಸುವ ಆಧಾರ ಧರ್ಮವಾಗಿರಬೇಕು. ಇಸ್ಲಾಮ್ ಧರ್ಮದ ಶಿಕ್ಷಣದಿಂದ ಅವರ ಜೀವನದಲ್ಲಿಯೂ ವಸಂತಾಗಮನ ಆಗಬೇಕು. ನಮ್ಮ ಉಪದೇಶಗಳು ಮತ್ತು ಉತ್ತಮ ಮಾತುಗಳಿಂದ ಅವರಿಗೆ ಒಳಿತಾಗಬೇಕು; ಅವರಿಗೆ ನೇರ ಮಾರ್ಗ ದೊರಕುವಂತಾಗಬೇಕು; ಅವರ ತೊಂದರೆಗಳು ನೀಗಬೇಕು ಮತ್ತು ಜೀವನದ ಸಮಸ್ಯೆಗಳಿಗೆ ಪರಿಹಾರ ದೊರೆಯಬೇಕು. ಒಂದು ಮರವನ್ನು ಬೆಳೆಸಲು ನೀರಾವರಿಯ ಮಹತ್ವ ಪಡೆದಿರುವಂತೆಯೇ ಮಾನವರೊಂದಿಗಿನ ನಮ್ಮ ಉತ್ತಮ ಬಾಂಧವ್ಯದಿಂದ ಅವರ ಇಹ-ಪರಗಳ ಯಶಸ್ಸು ಸಾಧ್ಯ. ಬೇರೆ ಬೇರೆ ಧರ್ಮಗಳನ್ನು ಅನುಸರಿಸುತ್ತಿರುವ ಜನರೊಂದಿಗೆ ನಮ್ಮ ಸಂಬಂಧವು ನಾಮಮಾತ್ರಕ್ಕೆ ಇರಬಾರದು; ವ್ಯಾಪಾರ-ವಹಿವಾಟಿನ ಮಟ್ಟಿಗೆ ಸೀಮಿತಗೊಳಿಸಬಾರದು. ಇಂತಹ ಸಂಬಂಧವು ಗಿಡಕ್ಕೆ ನೀರು ಬಿಡುವುದರ ಬದಲು ಅದರ ಬಳಿ ನೀರಿನ ಲೋಟ ಇಟ್ಟಂತೆ ನಿರರ್ಥಕವಾದೀತು. ಹಾಗಾಗಿ ಮಾನವರ ಜೊತೆಗಿನ

ಸಂಬಂಧವು ಇಸ್ಲಾಮಿನ ಆಧಾರದಲ್ಲಿ ಇರಬೇಕು ಮತ್ತು ಭವ್ಯವಾದ ಭವಿಷ್ಯವನ್ನು ಸಾಧ್ಯಗೊಳಿಸುವ ಪರಿಶ್ರಮದೊಂದಿಗಿರಬೇಕು. ಅಲ್ಲಾಹನ ಸಂದೇಶವಾಹಕರ(ಸ) ಚರ್ಯೆಯು ಅದನ್ನೇ ಸೂಚಿಸುತ್ತದೆ.

"ಇದೊಂದು ವಚನವಾಗಿದೆ. ಇದನ್ನು ನನ್ನಿಂದ ನೀವು ಸ್ವೀಕರಿಸಿದರೆ ಇದರ ಮೂಲಕ ನೀವು ಇಡೀ ಅರೇಬಿಯವನ್ನು ಜಯಿಸುವಿರಿ ಮತ್ತು ಸಕಲ ಅರಬೇತರರು ನಿಮಗೆ ಅಧೀನರಾಗುವರು." (ಸೀರತ್ ಇಬ್ನು ಹಿಶಾಮ್)

ಹಾಗಾಗಿ ನಿಮ್ಮ ಸನಿಹದಲ್ಲಿರುವ ಮುಸ್ಲಿಮೇತರ ಸಹೋದರರ ಮುಂದೆ ಈ ಕೆಳಗಿನ ವಿಶೇಷತೆಗಳ ಬೆಳಕಿನಲ್ಲಿ ಇಸ್ಲಾಮಿನ ಪರಿಚಯವನ್ನು ಮಾಡಿಸಿ ಕೊಡಬೇಕು.

- ಇಸ್ಲಾಮ್ ಧರ್ಮವು ಸಕಲ ಪ್ರವಾದಿಗಳ ಮತ್ತು ಸರ್ವ ಕಾಲದ ಧರ್ಮವಾಗಿದೆ.
- ಇದೇ ಧರ್ಮದ ಮೂಲಕ ಮಾತ್ರವೇ ಸಕಲ ಮಾನವರ ಇಹ-ಪರಗಳ ಯಶಸ್ಸು ಸಾಧ್ಯ.
- ಈ ಧರ್ಮವು ಮಾನವ ಜೀವನದ ಸಕಲ ರಂಗಗಳನ್ನೂ ಆವರಿಸುತ್ತದೆ ಮತ್ತು ಜೀವನದ ಯಾವುದೇ ವಿಷಯವು ಈ ಧರ್ಮದಿಂದ ಹೊರಗಿಲ್ಲ.
- ಈ ಧರ್ಮದ ಆಧಾರದಲ್ಲಿ ಸಕಲ ಮಾನವೀಯ ಸಮಸ್ಯೆಗಳಿಗೆ ಪರಿಹಾರವಿದೆ.
- ಇಸ್ಲಾಮ್ ಧರ್ಮವು ಮಾನವಕುಲದ ಏಕತೆಯನ್ನು ಸಾರುತ್ತದೆ; ಸಮಾನತೆ, ಶಾಂತಿ, ಸುಭಿಕ್ಷೆ, ಸಾಹೋದರ್ಯ, ಪ್ರೀತಿ, ನ್ಯಾಯ ಇತ್ಯಾದಿಗಳು ಇದರ ಮೂಲಭೂತ ಗುಣಗಳಾಗಿವೆ.
- ಈ ಧರ್ಮದ ಆಧಾರದಲ್ಲಿ ಉತ್ತಮ ಮಾನವ, ಉತ್ತಮ ಮನೆ, ಸುಭಿಕ್ಷ ಕುಟುಂಬ ಮತ್ತು ಸಜ್ಜನ ಸಮಾಜವು ಅಸ್ತಿತ್ವಕ್ಕೆ ಬರಲು ಸಾಧ್ಯವಿದೆ.
- ಪ್ರತಿಯೋರ್ವ ವ್ಯಕ್ತಿಯೂ ಏಕನಿಷ್ಠೆಯಿಂದ ಅಲ್ಲಾಹನ ಮುಂದೆ ಬಾಗಬೇಕು ಮತ್ತು ಬದುಕಿರುವಷ್ಟು ಕಾಲ ತನ್ನ ಆರಾಧನೆಗಳು ಹಾಗೂ ಸಕಲ ವ್ಯವಹಾರಗಳನ್ನು ಈ ಧರ್ಮದ ಬೆಳಕಿನಲ್ಲಿ ಕಾರ್ಯರೂಪಕ್ಕೆ ತರಬೇಕು ಎಂಬುದು ಇಸ್ಲಾಮ್ ಧರ್ಮದ ಬೇಡಿಕೆಯಾಗಿದೆ.

ನೆನಪಿಡಿ, ಧರ್ಮದ ಆಧಾರದಲ್ಲಿ ಮುಸ್ಲಿಮೇತರ ಸಹೋದರರ ಜೊತೆ ಸಂಬಂಧವಿರಿಸುವುದು, ನಮ್ಮ ವಿಶ್ವಾಸದ ಪರಿಪೂರ್ಣತೆ ಮತ್ತು ಸುರಕ್ಷೆಗೆ ಅತ್ಯಂತ ಅಗತ್ಯವಾಗಿದೆ. ಅಲ್ಲಾಹನ ಸಂದೇಶವಾಹಕರು(ಸ) ಹೀಗೆಂದಿರುವರು, ನಿಮ್ಮ ಪೈಕಿ

ಯಾರೂ ತನಗಾಗಿ ಇಷ್ಟಪಡುವುದನ್ನೇ ತನ್ನ ಸಹೋದರನಿಗಾಗಿ ಇಷ್ಟಪಡುವ ವರೆಗೆ ವಿಶ್ವಾಸಿಯಾಗಲಾರ.

ಅಂದರೆ, ನಮಗಾಗಿ ಅಲ್ಲಾಹ್ ಮತ್ತು ಅವನ ಸಂದೇಶವಾಹಕರು(ಸ) ಹಾಗೂ ಇಸ್ಲಾಮ್ ಧರ್ಮವನ್ನು ನಾವು ಇಷ್ಟಪಡುತ್ತೇವೆ. ಇದನ್ನೇ ನಮ್ಮ ಮುಸ್ಲಿಮೇತರ ಸಹೋದರರಿಗೂ ಇಷ್ಟಪಡಬೇಕು. ಅನ್ಯಥಾ ವಿಶ್ವಾಸವು ಪೂರ್ಣವಾಗಲಾರದು.

**(ಆ) ವಿಶ್ವಾಸಾಚಾರಗಳ ಸ್ಪಷ್ಟನೆ:** ಮುಸ್ಲಿಮೇತರ ಸಹೋದರರಿಗೆ ಇಸ್ಲಾಮೀ ವಿಶ್ವಾಸಾಚಾರಗಳನ್ನು ಸ್ಪಷ್ಟಪಡಿಸಿ ಕೊಡಬೇಕಾದುದು ಅವರೊಂದಿಗೆ ಉತ್ತಮ ಸಂಬಂಧವಿರಿಸುವುದರ ಇನ್ನೊಂದು ಮೂಲಭೂತ ಬೇಡಿಕೆಯಾಗಿದೆ. ಯಾವ ರೀತಿ ಒಂದು ರಾಷ್ಟ್ರದ ಭೂಪಟವನ್ನು ನೋಡಿ ಆ ರಾಷ್ಟ್ರವು ಹೇಗಿರುತ್ತದೆ ಎಂಬುದನ್ನು ಅರಿಯಲಾಗುತ್ತದೋ ಅದೇ ರೀತಿ ಇಸ್ಲಾಮೀ ವಿಶ್ವಾಸಾಚಾರಗಳ ಮೂಲಕ ಇಸ್ಲಾಮ್ ಯಾವ ವಿಷಯಗಳನ್ನು ಹೊಂದಿದೆ, ಅಲ್ಲಾಹ್ ಯಾರು, ಅವನ ಇಚ್ಛೆ ಏನು, ಅವನು ಮಾನವರನ್ನು ಯಾಕೆ ಸೃಷ್ಟಿಸಿದ್ದಾನೆ, ವಿವಿಧ ಕಾಲಘಟ್ಟಗಳಲ್ಲಿ ಬೇರೆ ಬೇರೆ ಪ್ರವಾದಿಗಳನ್ನು ಯಾಕೆ ಕಳುಹಿಸಿದ್ದಾನೆ, ಶಿಕ್ಷೆ-ರಕ್ಷೆಯ ಕಲ್ಪನೆಗಳೇನು, ಸ್ವರ್ಗ-ನರಕ ಗಳಿಗೆ ಅರ್ಹರು ಯಾರೆಲ್ಲ ಎಂಬಿತ್ಯಾದಿ ವಿಷಯಗಳನ್ನು ಅರಿಯಲು ಸಾಧ್ಯ.

**ಏಕದೇವತ್ವದ ಪರಿಚಯ:** ಇಸ್ಲಾಮೀ ವಿಶ್ವಾಸದಲ್ಲಿ ಮೊತ್ತಮೊದಲು ಅಲ್ಲಾಹನ ಕಲ್ಪನೆಯನ್ನೊಳಗೊಂಡ ಏಕದೇವ ವಿಶ್ವಾಸವು ಬರುತ್ತದೆ. ಅಲ್ಲಾಹನ ಪರಿಚಯ ಮಾಡಿಸುವುದು ಸಕಲ ಒಳಿತುಗಳ ಮೂಲ ಸೆಲೆಯಾಗಿದೆ. ಅಂದರೆ ಮುಸ್ಲಿಮೇತರ ಸಹೋದರರಿಗೆ ಏಕದೇವತ್ವವನ್ನು ಪರಿಚಯ ಮಾಡಿಸಿ ಕೊಡುವುದಕ್ಕಿಂತ ಉತ್ತಮ ಕಾರ್ಯ ಬೇರೆ ಇಲ್ಲ.

وَمَنْ اَحْسَنُ قَوْلًا مِّمَّنْ دَعَآ اِلَى اللّٰهِ

"ಅಲ್ಲಾಹನ ಕಡೆಗೆ ಆಹ್ವಾನಿಸಿದ ವ್ಯಕ್ತಿಯ ಮಾತಿಗಿಂತ ಶ್ರೇಷ್ಠವಾದ ಮಾತು ಇನ್ನಾರದಾಗಿರಲು ಸಾಧ್ಯ?" (ಹಾಮೀಮ್ ಅಸ್ಸಜ್ದ: 33)

ಪರಿಚಯದಿಂದಲೇ ಗೆಳೆತನ ಬೆಳೆಯುತ್ತದೆ ಮತ್ತು ಗೆಳೆತನವು ಗಾಢವಾದಷ್ಟೂ ಪ್ರೀತಿ ಬೆಳೆಯುತ್ತದೆ ಎಂಬುದು ಒಂದು ವಾಸ್ತವಿಕತೆಯಾಗಿದೆ. ಇಬ್ಬರು ವ್ಯಕ್ತಿಗಳು ಪರಸ್ಪರ ಅರಿಯದಿರುವುದರಿಂದ ಅಪರಿಚಿತರಾಗಿ ಉಳಿಯುತ್ತಾರೆ. ಹಾಗಾಗಿ ಅಲ್ಲಾಹನು ತನ್ನ ದಾಸರನ್ನು ತನಗೆ ಬಹಳ ನಿಕಟರೆಂದು ಸಾರುತ್ತಾನೆ.

وَنَحْنُ اَقْرَبُ اِلَيْهِ مِنْ حَبْلِ الْوَرِيْدِ

"ನಾವು ಅವನ ಕಂಠನಾಡಿಗಿಂತಲೂ ಹೆಚ್ಚು ಅವನಿಗೆ ಸಮೀಪವಿದ್ದೇವೆ."

(ಕಾಫ್: 16)

اَللّٰهُ وَلِيُّ الَّذِيْنَ اٰمَنُوْا

"ಅಲ್ಲಾಹನು ವಿಶ್ವಾಸಿಗಳ ರಕ್ಷಕ ಮಿತ್ರನಾಗಿರುತ್ತಾನೆ." (ಅಲ್ ಬಕರ: 257)

ಅಲ್ಲಾಹನಿಗೆ ಸಂಬಂಧಿಸಿದ ಇಂತಹ ಪರಿಚಯಾತ್ಮಕ ಮಾತುಗಳನ್ನು ಮುಸ್ಲಿಮೇತರ ಸಹೋದರರಿಗೆ ವಿವರಿಸಿ ಕೊಡಬೇಕಾಗಿದೆ. ಅಂದರೆ, ಅಲ್ಲಾಹ್ ಯಾರು, ಅವನ ಸಾಮರ್ಥ್ಯಗಳೇನು, ಅವನು ಎಂತಹ ಒಡೆಯನಾಗಿದ್ದಾನೆ, ಅವನು ಜೀವನ ಮತ್ತು ಮರಣಗಳನ್ನು ಹೇಗೆ ನೀಡುತ್ತಾನೆ, ಅವನು ಭೂಮಿ-ಆಕಾಶಗಳನ್ನು ಹೇಗೆ ಮಾಡಿದ, ಅವನು ತನ್ನ ಸೃಷ್ಟಿಗಳ ಮೇಲೆ ಎಷ್ಟು ಪ್ರೀತಿ ಇರಿಸಿದ್ದಾನೆ, ಅವನು ಒಳಿತುಗಳಿಗೆ ಹೇಗೆ ಪ್ರತಿಫಲ ನೀಡುತ್ತಾನೆ, ತನ್ನ ದಾಸ್ಯ-ಅನುಸರಣೆಗೆ ಏನು ಅಗತ್ಯವಿದೆ ಎಂದು ಸಾರುತ್ತಾನೆ, ಅವನು ಸಜ್ಜನರಿಗೆ ಹೇಗೆ ಸಹಾಯ ಮಾಡುತ್ತಾನೆ, ಅಕ್ರಮಿಗಳಿಗೆ ಹೇಗೆ ಶಿಕ್ಷೆ ನೀಡುತ್ತಾನೆ, ಅವನು ಸ್ವರ್ಗ ಮತ್ತು ನರಕಗಳನ್ನು ಯಾಕೆ ತಯಾರಿಸಿಟ್ಟಿದ್ದಾನೆ ಇತ್ಯಾದಿ. ಇದೇ ಕಾರಣವಾಗಿ ಅಲ್ಲಾಹನು ತನ್ನ ಸಮೃದ್ಧಿದಾಯಕ ಗುಣವಿಶೇಷಗಳನ್ನು ಪವಿತ್ರ ಕುರ್‌ಆನಿನಲ್ಲಿ ಬಹಳ ಸಮಗ್ರವಾಗಿ ವಿವರಿಸಿ ಕೊಟ್ಟಿದ್ದಾನೆ. ಅಲ್ಲಾಹನ ಪ್ರತಿ ಯೊಂದು ಗುಣವಿಶೇಷವು ಅವನ ಮಹೋನ್ನತ ಅಸ್ತಿತ್ವವನ್ನು ಪರಿಚಯ ಪಡಿಸಿ ಕೊಡು ತ್ತದೆ. ಪ್ರತಿಯೊಂದು ಗುಣವಿಶೇಷವನ್ನು ಅಭ್ಯಸಿಸಿದರೆ, ಖಂಡಿತ ವಾಗಿಯೂ ಅಲ್ಲಾಹನ ಮಹಾನ್ ಅಸ್ತಿತ್ವದ ಪರಿಚಯವಾಗುವುದು ಮಾತ್ರವಲ್ಲ, ಅವನ ಮೇಲೆ ಅಪಾರ ಪ್ರೀತಿ ಬೆಳೆಯುತ್ತದೆ ಮತ್ತು ಅವನಿಗಾಗಿ ಸರ್ವಸ್ವವನ್ನೂ ಸಮರ್ಪಿಸುವ ಮನೋಭಾವ ಬೆಳೆದು ಬರುವುದು.

**ಪ್ರವಾದಿತ್ವದ ಸ್ಪಷ್ಟನೆ:** ಅದೇ ರೀತಿ ಪ್ರವಾದಿತ್ವದ ಪರಿಚಯವನ್ನೂ ಮಾಡಬೇಕು. ಅಂದರೆ ಪ್ರವಾದಿ ಮುಹಮ್ಮದ್(ಸ)ರವರು ಅಲ್ಲಾಹನ ಅಂತಿಮ ಪ್ರವಾದಿ ಮತ್ತು ಸಕಲ ಮಾನವರಿಗೆ ಕರುಣೆಯಾಗಿ ಕಳುಹಿಸಲ್ಪಟ್ಟವರಾಗಿದ್ದಾರೆ ಎಂಬುದನ್ನು ತಿಳಿಸಿ ಕೊಡಬೇಕು. ವಿಶೇಷವಾಗಿ ಈ ಕೆಳಗಿನ ಅಂಶಗಳ ಮೂಲಕ ಅವರ(ಸ) ಪರಿಚಯ ಮಾಡಿಸಬೇಕು.

- ಪ್ರವಾದಿವರ್ಯರ(ಸ) ಆರಾಧನೆಗಳು.

- ಅವರ ಸಂದೇಶ ಮತ್ತು ಬೋಧನೆಗಳು.
- ಅವರ ಚಾರಿತ್ರ್ಯ ಪವಿತ್ರ ಕುರ್‌ಆನಿನ ಪ್ರಾಯೋಗಿಕ ಮಾದರಿ.
- ಅವರ ಉನ್ನತ ಚಾರಿತ್ರ್ಯಕ್ಕೆ ಮಕ್ಕಾವಾಸಿಗಳ ಸಾಕ್ಷ್ಯ ಮತ್ತು ಸಾದಿಕ್ (ಸತ್ಯಸಂಧ), ಅಮೀನ್ (ಪ್ರಾಮಾಣಿಕ) ಎಂಬ ಬಿರುದು.
- ಅವರ(ಸ) ಕೌಟುಂಬಿಕ ಜೀವನ.
- ಮಹಿಳಾ ಹಕ್ಕುಗಳ ಪಾಲನೆಗೆ ಪ್ರವಾದಿವರ್ಯರ(ಸ) ಸುವಾರ್ತೆಗಳು.
- ಮಹಿಳಾ ಸಹಾಬಿಗಳ ತರಬೇತಿ.
- ವಿವಿಧ ಧರ್ಮಗಳನ್ನು ಅನುಸರಿಸುವವರ ನಡುವೆ ಶಾಂತಿಯ ಕಾರ್ಯಕ್ರಮಗಳು, 'ಹಲ್‌ಫುಲ್ ಫುಝೂಲ್'ನ (ಫುಝೂಲ್ ಒಪ್ಪಂದ) ಬೆಳಕಿನಲ್ಲಿ.
- ಮಕ್ಕಾದಲ್ಲಿ ಪ್ರವಾದಿವರ್ಯರು(ಸ) ಮತ್ತು ಅವರ ಸಂಗಾತಿಗಳ ಸೌಹಾರ್ದತೆ.
- ಮಕ್ಕಾದಲ್ಲಿ ಶಾಂತಿ ಸ್ಥಾಪನೆಗಾಗಿ ಅವರ ಪ್ರಯತ್ನಗಳು.
- ಅಕ್ರಮ-ಅನ್ಯಾಯಗಳ ನಿವಾರಣೆಗೆ ಅವರ ನಡೆಗಳು.
- ವಲಸೆಯಂತಹ ಸಂದಿಗ್ಧ ಸ್ಥಿತಿಲ್ಲಿಯೂ ಜನರ ಅಡಮಾನಗಳ ಬಗ್ಗೆ ಕಾಳಜಿ.
- ಕೈದಿಗಳು ಮತ್ತು ಅಪರಾಧಿಗಳ ಜತೆಗೆ ಅವರ ಸದ್ವರ್ತನೆ.
- ವಲಸೆಯ ಬಳಿಕ ಮದೀನದ ಪರಿಸರದ ಗೋತ್ರಗಳ ಜತೆಗೆ ಒಪ್ಪಂದ.
- ಪ್ರವಾದಿ ಮುಹಮ್ಮದ್(ಸ) ಓರ್ವ ಮಾದರಿ ಆಡಳಿತಗಾರ.
- ದೇಶದ ಹಿತಚಿಂತಕ ಜನತೆಯಿಂದ ಮಾತ್ರ ದೇಶದ ಸುಭಿಕ್ಷೆ ಸಾಧ್ಯವಿದೆ (ವಿದಾಯ ಭಾಷಣ).

ಈ ಅಂಶಗಳ ಆಧಾರದಲ್ಲಿ ಪ್ರವಾದಿವರ್ಯರ(ಸ) ಪರಿಚಯಕ್ಕಾಗಿ,

- ನೆರೆಕರೆ ಮತ್ತು ಸಹೋದ್ಯೋಗಿಗಳ ಜತೆಗೆ ಚರ್ಚಿಸಬೇಕು. ಅವರೊಂದಿಗೆ ವೈಯಕ್ತಿಕ ಮತ್ತು ಸಾಮೂಹಿಕ ಭೇಟಿಯ ವ್ಯವಸ್ಥೆ ಮಾಡಬೇಕು.
- ನಮ್ಮ ಮನೆಗಳಲ್ಲಿ ಅವರಿಗಾಗಿ ವಿಶೇಷ ಔತಣವನ್ನು ಏರ್ಪಡಿಸಬೇಕು.
- ಅವರ ವೈಯಕ್ತಿಕ ಸಮಸ್ಯೆಗಳ ಬಗ್ಗೆ ಆಸಕ್ತಿ ವಹಿಸಬೇಕು ಮತ್ತು ಅವುಗಳನ್ನು ಪರಿಹರಿಸಲು ಪ್ರಯತ್ನಿಸಬೇಕು.
- ಉಡುಗೊರೆ ನೀಡುವ ಮತ್ತು ಅಗತ್ಯಾನುಸಾರ ಪವಿತ್ರ ಕುರ್‌ಆನ್, ಪ್ರವಾದಿ ಚರಿತ್ರೆ ಮತ್ತಿತರ ವಿಷಯಗಳಿಗೆ ಸಂಬಂಧಿಸಿದ ಪುಸ್ತಕಗಳನ್ನು ನೀಡಬೇಕು.

ಈ ಕಾರ್ಯಗಳನ್ನು ಮಾಡುವ ಸಂದರ್ಭದಲ್ಲಿ ಪ್ರವಾದಿವರ್ಯರ(ಸ) ಚರಿತ್ರೆಗೆ ಸಂಬಂಧಿಸಿ ಚರ್ಚಿಸುವ ವ್ಯವಸ್ಥೆ ಮಾಡಬೇಕು.

ಪ್ರವಾದಿವರ್ಯರನ್ನು(ಸ) ಪರಿಚಯ ಮಾಡಿಸಿ ಕೊಡುವ ನಿಟ್ಟಿನಲ್ಲಿ, ನಾವು ಸ್ವಯಂ ಪ್ರವಾದಿವರ್ಯರ(ಸ) ಮಾದರಿಯಂತೆ ಬಾಳಿ ತೋರಿಸಬೇಕಾದುದು ಅಗತ್ಯ. ಪ್ರತಿಯೋರ್ವ ಮುಸ್ಲಿಮನೂ ಪ್ರವಾದಿಚರ್ಯೆಯ ಜೀವಂತ ಮಾದರಿಯಾದರೆ, ಜನರನ್ನು ಸುಧಾರಣೆಯ ಕಡೆಗೆ ಆಹ್ವಾನಿಸಲು ಅದಕ್ಕಿಂತ ಪ್ರಭಾವಶಾಲಿ ವಿಧಾನ ಬೇರೆ ಇರಲಾರದು. ಹಾಗಾಗಿ ಮುಸ್ಲಿಮೇತರ ಸಹೋದರರಿಗೆ ಪುಸ್ತಕಗಳನ್ನು ನೀಡುವುದರ ಜತೆಗೆ ಪ್ರವಾದಿಚರ್ಯೆಯ ಬೆಳಕಿನಲ್ಲಿ ನಮ್ಮ ವ್ಯಕ್ತಿತ್ವ, ಕುಟುಂಬ, ವ್ಯವಹಾರ, ವ್ಯಾಪಾರ ಇತ್ಯಾದಿಗಳನ್ನು ಸುಧಾರಿಸಲು ಪ್ರಯತ್ನಿಸುತ್ತಾ ಇರಬೇಕು.

ಲೋಕಕ್ಕೆ ಪ್ರವಾದಿಗಳ ಆಗಮನವು ಮಾನವರ ಮೂಲಭೂತ ಅಗತ್ಯಗಳಲ್ಲಿ ಒಂದಾಗಿದೆ. ಅಂದರೆ ಯಾವ ರೀತಿ ಮಾನವನಿಗೆ ಬದುಕುವುದಕ್ಕಾಗಿ ಗಾಳಿ, ನೀರು ಮತ್ತು ಆಹಾರದ ಅಗತ್ಯ ಇರುವುದೋ ಅದೇ ರೀತಿ ಇಹ-ಪರಗಳ ಯಶಸ್ಸಿಗೆ ಪ್ರವಾದಿ ಗಳ ಮೇಲೆ ವಿಶ್ವಾಸ ತಾಳುವುದು ಅಗತ್ಯವಾಗಿದೆ. ಹಾಗಾಗಿ ಪ್ರವಾದಿತ್ವದ ಕಲ್ಪನೆಯ ಕುರಿತು ಚರ್ಚೆ ನಡೆದಾಗಲೆಲ್ಲ ಈ ಪ್ರಮುಖ ಅಂಶವನ್ನು ಜ್ಞಾಪಕ ದಲ್ಲಿಟ್ಟುಕೊಳ್ಳಬೇಕು.

ಅಂತೆಯೇ ಪ್ರವಾದಿವರ್ಯರ(ಸ) ಕರುಣಾಮಯಿ ವ್ಯಕ್ತಿತ್ವಕ್ಕೆ ಸಂಬಂಧಿಸಿ ಅಲ್ಲಾಹನು ಹೇಳಿರುವ ಈ ಮಾತನ್ನೂ ನೆನಪಿನಲ್ಲಿಡಬೇಕು,

لَقَدْ جَآءَكُمْ رَسُولٌ مِّنْ أَنفُسِكُمْ عَزِيزٌ عَلَيْهِ مَا عَنِتُّمْ حَرِيصٌ عَلَيْكُم بِٱلْمُؤْمِنِينَ رَءُوفٌ رَّحِيمٌ ﴿١٢٨﴾

"ನೋಡಿರಿ, ನಿಮ್ಮ ಬಳಿಗೆ ಓರ್ವ ಸಂದೇಶವಾಹಕರು ಬಂದಿರುತ್ತಾರೆ. ಅವರು ನಿಮ್ಮವರಿಂದಲೇ ಆಗಿರುತ್ತಾರೆ. ನೀವು ನಷ್ಟ ಹೊಂದುವುದು ಅವರಿಗೆ ಅಸಹನೀಯವಾಗಿದೆ. ಅವರು ನಿಮ್ಮ ಯಶಸ್ಸಿಗೆ ಹಂಬಲಿಸುವವರಾಗಿದ್ದಾರೆ. ಅವರು ಸತ್ಯವಿಶ್ವಾಸಿಗಳಿಗೆ ವತ್ಸಲರೂ ಕರುಣಾಳುವೂ ಆಗಿರುತ್ತಾರೆ." **(ಅತ್ತೌಬ: 128)**

**ಪರಲೋಕ ಸ್ಮರಣೆ:** ಮುಸ್ಲಿಮೇತರ ಸಹೋದರರ ಮುಂದೆ ಇಸ್ಲಾಮಿನ ಪರಿಚಯ ಮಾಡಿಸಲು ಪರಲೋಕ ಸ್ಮರಣೆಯು ಅಗತ್ಯವಾಗಿದೆ. ಅಂದರೆ ಮಾನವನು ಮರಣ ಹೊಂದಿದ ಬಳಿಕ ಪುನಃ ಎಬ್ಬಿಸಲ್ಪಡುವನು ಮತ್ತು ಇಹಲೋಕದಲ್ಲಿ ತಾನು ಎಸಗಿರುವ

ಕರ್ಮಗಳ ವಿಚಾರಣೆಯನ್ನು ಎದುರಿಸುವನು. ಇಸ್ಲಾಮಿನ ಮೂಲಭೂತ ವಿಶ್ವಾಸವು ತೌಹೀದ್ (ಏಕದೇವತ್ವ), ರಿಸಾಲತ್ (ಪ್ರವಾದಿತ್ವ) ಮತ್ತು ಆಖಿರತ್ (ಪರಲೋಕ) ಆಗಿದೆ. ಪರಲೋಕ ವಿಶ್ವಾಸವನ್ನು ವಿವರಿಸಿ ಕೊಡಲು ಸಾಕಷ್ಟು ಪರಿಶ್ರಮ ಪಡಬೇಕಾಗಿ ಬರುತ್ತದೆ. ಏಕೆಂದರೆ ಸತ್ತು ಮಣ್ಣಾಗಿ ಹೋದ ಮೇಲೆ ಪುನಃ ಎಬ್ಬಿಸಲ್ಪಡುವುದು ಹೇಗೆ ಮತ್ತು ಸತ್ತು ಶತಮಾನಗಳು ಕಳೆದ ಮೇಲೆ ಮಾನವನು ತನ್ನ ಮೂಲ ಸ್ವರೂಪದಲ್ಲಿ ಎದ್ದು ಬರುವುದು ಹೇಗೆ ಸಾಧ್ಯ ಎಂಬುದನ್ನು ಸಾಮಾನ್ಯವಾಗಿ ಜನರು ನಂಬಲು ತಯಾರಿರುವುದಿಲ್ಲ.

ಪವಿತ್ರ ಕುರ್‌ಆನಿನಲ್ಲಿ ಪರಲೋಕದ ವಾಸ್ತವಿಕತೆಗೆ ಹಲವು ಆಧಾರ ಪ್ರಮಾಣಗಳನ್ನು ನೀಡಲಾಗಿದೆ. ಬೌದ್ಧಿಕ, ವೈಜ್ಞಾನಿಕ, ನೈತಿಕ, ಚಾರಿತ್ರಿಕ, ತಾರ್ಕಿಕ ಇತ್ಯಾದಿ. ಕೆಲವು ವಚನಗಳನ್ನು ಅವಲೋಕಿಸೋಣ.

وَاَنَّ اللّٰهَ يَبْعَثُ مَنْ فِي الْقُبُوْرِ ۝

“ಸಮಾಧಿಗಳೊಳಗೆ ಹೋಗಿರುವವರನ್ನು ಅಲ್ಲಾಹನು ಖಂಡಿತವಾಗಿಯೂ ಎಬ್ಬಿಸುವನು.” (ಅಲ್ ಹಜ್ಜ್: 7)

قُلْ سِيْرُوْا فِي الْاَرْضِ فَانْظُرُوْا كَيْفَ بَدَاَ الْخَلْقَ

ثُمَّ اللّٰهُ يُنْشِئُ النَّشْاَةَ الْاٰخِرَةَ

“ಅವನು ಸೃಷ್ಟಿಯ ಆರಂಭ ಹೇಗೆ ಮಾಡಿರುತ್ತಾನೆಂಬುದನ್ನು ಭೂಮಿಯ ಮೇಲೆ ಸಂಚರಿಸಿ ನೋಡಿರಿ ಎಂದು ಅವರೊಡನೆ ಹೇಳಿರಿ. ಮುಂದೆ ಅಲ್ಲಾಹನು ಎರಡನೆಯ ಬಾರಿಯೂ ಜೀವ ನೀಡುವನು.” (ಅಲ್ ಅಂಕಬೂತ್: 20)

اَللّٰهُ الَّذِيْ خَلَقَكُمْ ثُمَّ رَزَقَكُمْ ثُمَّ يُمِيْتُكُمْ ثُمَّ يُحْيِيْكُمْ

“ಅಲ್ಲಾಹನೇ ನಿಮ್ಮನ್ನು ಸೃಷ್ಟಿಸಿದವನು, ತರುವಾಯ ನಿಮಗೆ ಜೀವನಾಧಾರ ನೀಡಿದವನು, ಅನಂತರ ಅವನು ನಿಮಗೆ ಮರಣ ಕೊಡುತ್ತಾನೆ ಮತ್ತೆ ಅವನು ನಿಮ್ಮನ್ನು ಜೀವಂತಗೊಳಿಸುತ್ತಾನೆ.” (ಅರ್‍ರೂಮ್: 40)

اِنَّ الَّذِيْٓ اَحْيَاهَا لَمُحْيِ الْمَوْتٰى

"ಅವನೇ ಮೃತರನ್ನೂ ಪುನಃ ಜೀವಂತಗೊಳಿಸಲಿರುವನು." (ಫುಸ್ಸಿಲತ್: 39)

أَيَحْسَبُ الْإِنسَانُ أَلَّن نَّجْمَعَ عِظَامَهُ ﴿٣﴾

"ನಾವು ಮಾನವನ ಎಲುಬುಗಳನ್ನು ಒಟ್ಟುಗೂಡಿಸಲಾರೆವು ಎಂದು ಅವನು ಭಾವಿಸುತ್ತಿರುವನೇ?" (ಅಲ್ ಕಿಯಾಮ: 3)

ಪರಲೋಕವು ಈ ಕೆಳಗಿನ ವಿಷಯಗಳಿಗಾಗಿಯೂ ಅಗತ್ಯವಾಗಿದೆ,

- ಪ್ರತಿಯೋರ್ವ ಮಾನವನಿಗೂ ಇಹಲೋಕದಲ್ಲಿರುತ್ತಾ ತಾನು ಏನೆಲ್ಲ ಮಾಡಿರುವೆನೆಂಬುದನ್ನು ಅರಿಯಲು.
- ಪ್ರತಿಯೋರ್ವನ ಸತ್ಕರ್ಮ ಮತ್ತು ದುಷ್ಕರ್ಮಗಳ ಲೆಕ್ಕಾಚಾರ ಪಡೆಯಲು.
- ಇಹಲೋಕದಲ್ಲಿ ಸತ್ಕರ್ಮಗಳನ್ನೆಸಗುವವರಿಗೆ ಪರಲೋಕದಲ್ಲಿ ಐಷಾರಾಮಿ ಜೀವನ ದೊರಕಿಸಲು.
- ಅಲ್ಲಾಹನಿಗೆ ವಿದ್ರೋಹವೆಸಗುವವರಿಗೆ ಶಿಕ್ಷೆ ನೀಡಲು.
- ಅಕ್ರಮವೆಸಗಿದ ಮತ್ತು ಜನರ ಹಕ್ಕುಚ್ಯುತಿ ಮಾಡಿದ ಅಪರಾಧಿಗಳನ್ನು ಕಠಿಣವಾಗಿ ಶಿಕ್ಷಿಸಲು.

ಏಕೆಂದರೆ ಇವೆಲ್ಲವೂ ಐಹಿಕ ಜೀವನದಲ್ಲಿ ಸಾಧ್ಯವಿಲ್ಲ. ಉದಾಹರಣೆಗೆ: ಒಬ್ಬ ವ್ಯಕ್ತಿ ಜೀವನವಿಡೀ ಕೇವಲ ಸತ್ಕರ್ಮಗಳನ್ನೆಸಗುತ್ತಿದ್ದ ಎಂದಿಟ್ಟುಕೊಳ್ಳಿ, ಅವನಿಗೆ ಅದಕ್ಕಾಗಿ ಯಾರು ಏನು ಪ್ರತಿಫಲ ನೀಡಬಲ್ಲರು? ಯಾರಾದರೂ ಏನಾದರೂ ನೀಡಿದರು ಎಂದಿಟ್ಟುಕೊಳ್ಳಿ. ಆದರೆ ಐಹಿಕವಾದ ಈ ಹ್ರಸ್ವ ಜೀವನದಲ್ಲಿ ಅವನಿಗೆ ಐಷಾರಾಮಿ ಜೀವನ ಎಲ್ಲಿ ದೊರಕುವುದು? ಹಾಗಾಗಿ ಸತ್ಕರ್ಮಗಳ ಲೆಕ್ಕಾಚಾರ ಪಡೆದು, ಅದಕ್ಕಾಗಿ ಅಪಾರವಾದ ಪ್ರತಿಫಲದೊಂದಿಗೆ ಶಾಶ್ವತವಾದ ಐಷಾರಾಮಿ ಜೀವನ ದಯಪಾಲಿಸುವಂತಹ ಒಂದು ದಿನ ಆಗತವಾಗಲೇ ಬೇಕು. ಅದುವೇ ಪರಲೋಕ.

ಅದೇ ರೀತಿ ಜನರ ಮೇಲೆ ಅಕ್ರಮವೆಸಗುತ್ತಿದ್ದು, ಹಲವಾರು ಕುಟುಂಬಗಳನ್ನು ಹಾಳು ಮಾಡಿದ ಮತ್ತು ಜೀವ-ಸೊತ್ತುಗಳ ನಾಶಕ್ಕೆ ಕಾರಣವಾದ ವ್ಯಕ್ತಿಗೆ ಏನು ಶಿಕ್ಷೆ ನೀಡಲು ಸಾಧ್ಯ? ಒಂದು ವೇಳೆ ಮರಣದಂಡನೆ ನೀಡಿದರೂ ಅದು ಒಬ್ಬ ಮರ್ದಿತನ ಮೇಲೆ ಎಸಗಿದ ಅಕ್ರಮಕ್ಕೆ ಶಿಕ್ಷೆಯಾಗುವುದು. ಇನ್ನುಳಿದ ಮರ್ದಿತರ ಮೊರೆಯ ಅವಸ್ಥೆ ಏನು? ಅವರಿಗೆ ನ್ಯಾಯ ದೊರೆಯಲು ಸಾಧ್ಯವಿಲ್ಲ ತಾನೇ? ಏಕೆಂದರೆ ಐಹಿಕ

ಜೀವನವು ಕೇವಲ ಒಂದು ಜೀವನವಾಗಿದೆ. ಇಲ್ಲಿ ಒಬ್ಬನಿಗೆ ಹಲವು ಬಾರಿ ಮರಣದಂಡನೆ ನೀಡಲು ಸಾಧ್ಯವಿಲ್ಲ. ಆದ್ದರಿಂದಲೇ ಎಲ್ಲ ಮರ್ದಿತರಿಗೂ ನ್ಯಾಯ ದೊರಕಿಸಿ ಕೊಡಲಿಕ್ಕಾಗಿ, ಪ್ರತಿಯೊಬ್ಬ ಅಕ್ರಮಿಗೂ ಅವನ ಒಂದೊಂದು ಅಪರಾಧಕ್ಕೆ ಸೂಕ್ತ ಪ್ರತೀಕಾರವನ್ನು ಮರ್ದಿತರ ಸಮ್ಮುಖದಲ್ಲೇ ಪಡೆಯುವಂತಹ ಒಂದು ದಿನ ಆಗತವಾಗಬೇಕು. ಅದುವೇ ವಾಸ್ತವದಲ್ಲಿ ಪರಲೋಕವಾಗಿದೆ.

ಒಟ್ಟಿನಲ್ಲಿ, ಪರಲೋಕ ವಿಶ್ವಾಸಕ್ಕೆ ಸಂಬಂಧಿಸಿದ ಆಧಾರ ಪ್ರಮಾಣಗಳು ಎಷ್ಟು ಸರಳವಾಗಿವೆ ಎಂಬುದು ಪ್ರಸ್ತುತ ವಿವರಣೆಯಿಂದ ತಿಳಿಯಬಹುದಾಗಿದೆ. ಮುಸ್ಲಿಮೇತರ ಸಹೋದರರೊಂದಿಗೆ ಚರ್ಚಿಸುವಾಗ ಸ್ಪಷ್ಟವಾಗಿ, ವಸ್ತುನಿಷ್ಠವಾಗಿ ಆಧಾರ ಪ್ರಮಾಣಗಳನ್ನು ಸಲ್ಲಿಸಬೇಕಾಗಿದೆ. ಪರಲೋಕ ಕಲ್ಪನೆಯು ತೀರಾ ಸ್ವಾಭಾವಿಕವಾದುದು ಮತ್ತು ಪ್ರತಿಯೋರ್ವ ವ್ಯಕ್ತಿಯ ಮನದಾಳದ ಆಗ್ರಹವೂ ಆಗಿದೆ ಎಂಬುದು ನೆನಪಿನಲ್ಲಿಟ್ಟು ಕೊಳ್ಳಬೇಕು. ಹಾಗಾಗಿ ಪ್ರತಿದಿನ ಮಾನವರ ಜನನ ಮತ್ತು ಮರಣಗಳು ಚಿಂತಿಸುವವರ ಮಟ್ಟಿಗೆ ಇಹಲೋಕ ಜೀವನವು ನಶ್ವರವಾದುದು ಮತ್ತು ಪರಲೋಕ ಜೀವನವು ಅನಶ್ವರವಾದುದು ಎಂಬುದನ್ನು ಸ್ಪಷ್ಟಪಡಿಸುತ್ತವೆ.

**(ಇ) ಒಳಿತುಗಳ ವ್ಯಾಪಕತೆ:** ದೇಶಬಾಂಧವರೊಂದಿಗೆ ಸಂಬಂಧವನ್ನು ಗಟ್ಟಿಗೊಳಿಸುವ ನಿಟ್ಟಿನಲ್ಲಿ ಒಳಿತುಗಳನ್ನು ವ್ಯಾಪಕಗೊಳಿಸುವುದಕ್ಕೆ ಮಹತ್ತರ ಸ್ಥಾನವಿದೆ. ಅಂದರೆ ಇಸ್ಲಾಮ್ ಸಮರ್ಪಿಸುವ ಒಳಿತುಗಳ ವಿಶಾಲ ಮತ್ತು ಸಮಗ್ರ ಕಲ್ಪನೆಯನ್ನು ಅವರಿಗೆ ಪರಿಚಯ ಪಡಿಸಿಕೊಡಬೇಕಾಗಿದೆ. ಮಾನವ ಸಂಬಂಧಗಳನ್ನು ಉತ್ತಮ ಪಡಿಸಲಿಕ್ಕಾಗಿ ಇಸ್ಲಾಮೀ ನೀತಿಗಳನ್ನು ಸ್ಪಷ್ಟಪಡಿಸ ಬೇಕಾಗಿದೆ. ಓರ್ವ ಉತ್ತಮ ತಾಯಿ, ಉತ್ತಮ ತಂದೆ, ಉತ್ತಮ ಪತಿ, ಉತ್ತಮ ಪತ್ನಿ, ಅನುಸರಣಶೀಲ ಸಂತಾನ, ಸಂಬಂಧಿಕ ರೊಂದಿಗೆ ಸದ್ವರ್ತನೆ ಇತ್ಯಾದಿಗಳಿಗೆ ಸಂಬಂಧಿಸಿ ಇರುವ ಕುರ್‌ಆನ್ ಮತ್ತು ಪ್ರವಾದಿ ವಚನಗಳನ್ನು ವ್ಯಾಪಕಗೊಳಿಸಬೇಕು. ವಿಧವೆಯರು, ದರಿದ್ರರು, ಅನಾಥರು ಮತ್ತು ಅಸಹಾಯಕರ ಸೇವೆಗೆ ಸಂಬಂಧಿಸಿ ಇಸ್ಲಾಮಿನಲ್ಲಿ ಎಷ್ಟು ಮಹತ್ವ ಮತ್ತು ಶ್ರೇಷ್ಠತೆ ಇದೆ ಎಂಬುದನ್ನು ನಮ್ಮ ಕರ್ಮಗಳ ಮೂಲಕ ವ್ಯಕ್ತಪಡಿಸಬೇಕು. ಹಾಗಾಗಿ ಈ ಕೆಳಗೆ ನೀಡುವ ಅಂಶಗಳ ಆಧಾರದಲ್ಲಿ ವಿಶೇಷ ಪ್ರಯತ್ನ ನಡೆಯಬೇಕಾಗಿದೆ.

- ಧರ್ಮಕ್ಕೆ ಸಂಬಂಧಿಸಿದ ಒಂದು ವಿಷಯವಾದರೂ ಅರ್ಥವಾದರೆ, ಅದನ್ನು ಇತರರಿಗೆ ತಲುಪಿಸಬೇಕು.

- ಯಾರಾದರೂ ಸಹೋದರನ ಭೇಟಿಯಾದಾಗ ಮುಖದಲ್ಲಿ ಮುಗುಳ್ನಗು ಇರಬೇಕು.

• ಯಾರಿಗಾದರೂ ಸೇವೆಗೈಯುವ ಅಥವಾ ಸತ್ಕರ್ಮವೆಸಗುವ ಅವಕಾಶ ಒದಗಿದರೆ, ತಕ್ಷಣ ಮಾಡಿ ಬಿಡಬೇಕು.

• ಹಸಿದವರಿಗೆ ಉಣಿಸುವುದು, ದಾರಿಯಿಂದ ತೊಂದರೆಗೆ ಹೇತುವಾಗುವ ವಸ್ತುವನ್ನು ನೀಗಿಸುವುದು, ಸಂಧಾನ ಮಾಡಿಸುವುದು, ಪ್ರಯಾಣದಲ್ಲಿ ಯಾತ್ರಿಕರ ಸೇವೆ ಮಾಡುವುದು ಇತ್ಯಾದಿ ಕಾರ್ಯಗಳು ಒಳಿತುಗಳನ್ನು ಹರಡುವಲ್ಲಿ ಬಹಳ ಪರಿಣಾಮಕಾರಿಯಾಗಿವೆ. ಈ ಅವಕಾಶಗಳನ್ನು ಸಂಪೂರ್ಣ ಸದುಪಯೋಗ ಪಡಿಸಿಕೊಳ್ಳಬೇಕು.

ಏನಿದ್ದರೂ ಒಳಿತುಗಳು ಏನೆಂದು ನಮಗೆ ಚೆನ್ನಾಗಿ ಗೊತ್ತು. ಪವಿತ್ರ ಕುರ್‌ಆನ್ ಮತ್ತು ಪ್ರವಾದಿವಚನಗಳಲ್ಲಿ ತುಂಬಿರುವ ಆ ಒಳಿತುಗಳ ಭಂಡಾರ ವನ್ನು ಜನರಲ್ಲಿ ಹಂಚುವ ತುಡಿತ ಮತ್ತು ಕಳಕಳಿಯು ನಮ್ಮಲ್ಲಿ ಬೆಳೆದು ಬರಬೇಕಾದ ಅಗತ್ಯವಿದೆ. ಈ ಒಳಿತುಗಳ ಭಂಡಾರದಿಂದ ಯಾವ ದಿನ ಯಾವ ಒಳಿತನ್ನು ವ್ಯಾಪಕಗೊಳಿಸುವುದು ಎಂಬ ಒಂದು ತುಡಿತವು ಪ್ರತಿಯೋರ್ವ ವ್ಯಕ್ತಿಯಲ್ಲೂ ಇರಬೇಕು. ಆದರೆ ದುರದೃಷ್ಟವಶಾತ್, ಉತ್ತಮ ಸಮುದಾಯ ಮತ್ತು ಅತ್ಯುತ್ತಮ ಸಮೂಹ ಎಂಬ ನೆಲೆಯಲ್ಲಿ ನಾವು ಒಳಿತುಗಳನ್ನು ಹರಡುವ ಕಾರ್ಯದಲ್ಲಿ ನಿರೀಕ್ಷಿಸಿದಷ್ಟು ಯಶಸ್ಸನ್ನು ಗಳಿಸಿಲ್ಲ. ಕೊಂಚ ಈ ಕೆಳಗಿನ ಪ್ರಶ್ನೆಗಳನ್ನು ಅವಲೋಕಿಸೋಣ ಮತ್ತು ಅದಕ್ಕೆ ಉತ್ತರವನ್ನು ಕಂಡುಕೊಳ್ಳಲು ಸ್ವಯಂ ಪ್ರಯತ್ನಿಸೋಣ...

• ನಮ್ಮ ಅಸ್ತಿತ್ವದಿಂದ ಸಮಾಜದಲ್ಲಿ ಏನಾದರೂ ಸುಧಾರಣೆಯಾಗಿದೆಯೇ?

• ನಮ್ಮ ಮಕ್ಕಳ ಸ್ವಭಾವ ಕಂಡು ಮುಸ್ಲಿಮೇತರರು ಪ್ರಭಾವಿತಗೊಳ್ಳುತ್ತಿದ್ದಾರೆಯೇ?

• ಜನರು ನೋಡಿ ಈರ್ಷ್ಯೆ ಪಡುವಷ್ಟು ನಮ್ಮ ಮನೆ ಮತ್ತು ಕುಟುಂಬವು ಮಾದರಿಯೋಗ್ಯವಾಗಿದೆಯೇ?

• ನಮ್ಮ ವ್ಯಾಪಾರಗಳು ಪ್ರಾಮಾಣಿಕತೆಯಿಂದ ನಡೆಯುತ್ತಿವೆಯೇ?

• ನಮ್ಮ ವ್ಯವಹಾರಗಳು ಜನರ ಮೇಲೆ ಪ್ರಭಾವವನ್ನುಂಟು ಮಾಡುವಂತಿವೆಯೇ?

• ಬಸ್ ನಿಲ್ದಾಣ ಮತ್ತು ರೈಲ್ವೇ ನಿಲ್ದಾಣಗಳಲ್ಲಿ ನಿರ್ಗತಿಕರಿಗೆ ಮತ್ತು ವೃದ್ಧರಿಗೆ ಸಹಾಯ ಮಾಡಲು ನಮ್ಮ ಯುವಜನತೆ ಮುಂದಾಗುತ್ತಿದ್ದಾರೆಯೇ?

• ವಿವಿಧ ಸ್ಥಳಗಳಲ್ಲಿ ಎದುರಾಗುವ ಪಂಕ್ತಿಗಳು ಮತ್ತು ಜನಜಂಗುಳಿಯನ್ನು ಸರಿಪಡಿಸುವಲ್ಲಿ ನಮ್ಮ ಪಾತ್ರವೇನು?

ಇಂತಹ ಇನ್ನೂ ಹಲವು ಪ್ರಶ್ನೆಗಳಿರಬಹುದು. ಅವುಗಳ ಉತ್ತರ ಏನಾಗಿರುವುದು ಎಂಬ ಸ್ಪಷ್ಟ ಅರಿವು ಕೂಡ ನಮಗಿದೆ. ವಸ್ತುತಃ ಇಸ್ಲಾಮಿನಲ್ಲಿ ಒಳಿತುಗಳನ್ನು ಹರಡುವ ಕಲ್ಪನೆಯೇನಿದೆಯೋ, ಅದರ ಕುರಿತು ನಾವು ಸೂಕ್ತ ಗಮನವನ್ನು ಹರಿಸಿದ್ದೇ ಇಲ್ಲ. ಒಳಿತುಗಳ ಕಲ್ಪನೆಯಲ್ಲಿ ಒಂದು ಯುಕ್ತಿಯೂ ಅಡಗಿರುತ್ತದೆ. ಅದೇನೆಂದರೆ, ಒಂದು ಸತ್ಕರ್ಮ ಎಸಗಿದರೆ ಅದು ಇನ್ನೂ ಅನೇಕ ಸತ್ಕರ್ಮಗಳಿಗೆ ಕಾರಣವಾಗುತ್ತದೆ. ಈ ರೀತಿ ಸತ್ಕರ್ಮಗಳು ಒಳಿತುಗಳ ಪ್ರಸರಣಕ್ಕೆ ಹೇತುವಾಗುತ್ತವೆ.

هَلْ جَزَآءُ الْإِحْسَانِ إِلَّا الْإِحْسَانُ ﴿٦٠﴾

"ಒಳಿತಿನ ಪ್ರತಿಫಲ ಒಳಿತಲ್ಲದೆ ಇನ್ನೇನು?" (ಅರ್ರಹ್ಮಾನ್: 60)

ಇಸ್ಲಾಮೀ ಸಮಾಜದಲ್ಲಿ ಒಳಿತುಗಳು ವ್ಯಾಪಕವಾದಾಗ, ಪ್ರತಿಯೋರ್ವ ವ್ಯಕ್ತಿಯೂ ತನ್ನ ಸಾಮರ್ಥ್ಯಕ್ಕೆ ತಕ್ಕಂತೆ ಸತ್ಕರ್ಮಗಳನ್ನು ಎಸಗುತ್ತಲೇ ಇರುವನು. ತತ್ಪರಿಣಾಮವಾಗಿ, ಪ್ರಸ್ತುತ ಪ್ರಶ್ನೆಗಳ ಮೂಲಕ ಸ್ಪಷ್ಟಪಡಿಸಲಾಗಿರುವ ಎಲ್ಲ ವ್ಯವಹಾರಗಳು, ತನ್ನೆಲ್ಲ ಪ್ರಕಾಶದೊಂದಿಗೆ ಮುಸ್ಲಿಮ್ ಸಮಾಜದ ಘನತೆಯನ್ನು ಹೆಚ್ಚಿಸುತ್ತಿರುವುದಾಗಿ ಕಾಣುವುದು. ಗತ ಕಾಲದ ವಿಶ್ವಾಸಿಗಳು ಮಾನವ ಸೇವೆಯ ಎಂತೆಂತಹ ಭವ್ಯ ಮಾದರಿಗಳನ್ನು ಸ್ಥಾಪಿಸಿದ್ದಾರೆ ಎಂಬುದನ್ನು ನೋಡೋಣ...

- ಅಬೂಬಕರ್ ಸಿದ್ದೀಕ್(ರ)ರವರು ಯುದ್ಧದಲ್ಲಿ ಹುತಾತ್ಮರಾದವರ ಮಕ್ಕಳ ಬಳಿಗೆ ಹೋಗುತ್ತಿದ್ದರು; ಅವರ ಆಡುಗಳ ಹಾಲನ್ನು ಕರೆದು ಅವರಿಗೆ ನೀಡುತ್ತಿದ್ದರು.

- ಅಬುದ್ದರ್ದಾ(ರ)ರವರು ಮರಣಾಸನ್ನರಾದಾಗ, ತಮ್ಮ ಒಂಟೆಯನ್ನು ಉದ್ದೇಶಿಸಿ ಹೇಳಿದರು, "ಪುನರುತ್ಥಾನ ದಿನ ನಿನ್ನ ಪ್ರಭುವಿನ ಮುಂದೆ ನನ್ನೊಂದಿಗೆ ಜಗಳಾಡಬೇಡ. ಏಕೆಂದರೆ ನಾನು ನಿನ್ನ ಶಕ್ತಿಗೆ ಮೀರಿದ ಹೊರೆಯನ್ನು ನಿನ್ನ ಮೇಲೆ ಹೊರಿಸಿಲ್ಲ."

- ಅದಿಯ್ಯ್ ಬಿನ್ ಹಾತಿಮ್(ರ)ರವರು ಇರುವೆಗಳಿಗಾಗಿ ರೊಟ್ಟಿಯ ಚೂರುಗಳನ್ನು ತಯಾರಿಸುತ್ತಿದ್ದರು ಮತ್ತು, "ಇವು ಕೂಡ ನಮ್ಮ ನೆರೆಕರೆ ಆಗಿವೆ. ಹಾಗಾಗಿ ನಮ್ಮ ಮೇಲೆ ಇವುಗಳ ಹಕ್ಕೂ ಇದೆ" ಎಂದು ಹೇಳುತ್ತಿದ್ದರು.

- ಹ. ಝೈನಬ್(ರ)ರವರ ನಿಸ್ವಾರ್ಥ ಜನಸೇವೆಗಾಗಿ ಅವರಿಗೆ 'ಉಮ್ಮುಲ್ ಮಸಾಕೀನ್' (ಬಡವರ ಮಾತೆ) ಎಂಬ ಬಿರುದು ದೊರೆತಿತ್ತು. ಅವರ ಬಳಿ ಏನೇ ಇದ್ದರೂ ಅದನ್ನು ಜನರ ಸೇವೆಗಾಗಿ ವ್ಯಯಿಸುತ್ತಿದ್ದರು. ಏನೂ ಇಲ್ಲದಾಗ ನೂಲು

ನೇಯ್ದು ಹಣ ಗಳಿಸುತ್ತಿದ್ದರು ಮತ್ತು ಅದನ್ನು ಜನರ ಸೇವೆಯಲ್ಲಿ ವ್ಯಯಿಸುತ್ತಿದ್ದರು.

ಬಳಿಕದ ಕಾಲಘಟ್ಟಗಳಲ್ಲಿ ಇದೇ ಮನೋಭಾವದ ಆಧಾರದಲ್ಲಿ ಮುಸ್ಲಿಮ್ ಆಡಳಿತಗಾರರು, ಅಧಿಕಾರಿಗಳು, ಸೇನಾ ನಾಯಕರು, ಸ್ಥಿತಿವಂತರು ಮತ್ತು ಸಮುದಾಯದ ಪ್ರಭಾವಿ ಜನರು ಹೃದಯ ವೈಶಾಲ್ಯ ಮೆರೆಯುತ್ತಾ ಜನಸೇವೆಗೈದಿರುವರು.

♦ ಉಮರ್ ಬಿನ್ ಅಬ್ದುಲ್ ಅಝೀಝ್(ರ)ರವರು ಜಾನುವಾರುಗಳ ಮೇಲೆ ಕರುಣೆಗೆ ಸಂಬಂಧಿಸಿ ವಿಶೇಷ ಆದೇಶ ಜಾರಿಗೊಳಿಸಿದ್ದರು. ಆರಕ್ಷಕ ವಿಭಾಗಕ್ಕೆ ಅವರು ಅಧಿಕೃತವಾಗಿ ಈ ಕಾನೂನನ್ನು ಸೂಚಿಸಿದ್ದರು, ಜನರಿಗೆ ಜಾನುವಾರುಗಳ ಮೇಲೆ ಅವುಗಳ ಶಕ್ತಿಗೆ ಮೀರಿ ಹೊರೆ ಹೊರಿಸುವ ಅನುಮತಿ ಖಂಡಿತ ಇಲ್ಲ. ಜಾನುವಾರುಗಳ ಮೇಲೆ ಹೊರೆ ಇರುವಾಗ, ಅವುಗಳನ್ನು ವೇಗವಾಗಿ ಓಡಿಸುವ ಅನುಮತಿಯೂ ಇಲ್ಲ. ಜಾನುವಾರುಗಳಿಗೆ ಕಠಿಣವಾಗಿ ಶಿಕ್ಷಿಸುವ ಅನುಮತಿಯೂ ಇಲ್ಲ. ಹೊರೆ ಹೊತ್ತಿರುವ ಜಾನುವಾರುಗಳನ್ನು ಹೆಚ್ಚು ಹೊತ್ತು ನಿಲ್ಲಿಸುವುದು ಜನರ ಮಟ್ಟಿಗೆ ಅನುವದನೀಯ ಅಲ್ಲ. ಇವೆಲ್ಲವೂ ಇಸ್ಲಾಮೀ ಶರೀಅತ್‌ಗೆ ತೀರಾ ವಿರುದ್ಧವಾದ ಕಾರ್ಯಗಳಾಗಿವೆ. ಜಾನುವಾರುಗಳ ಮೇವಿನ ಬಗ್ಗೆ ಅಲ್ಲಾಹನಿಗೆ ಭಯಪಡಬೇಕಾದುದು ಅವುಗಳ ಒಡೆಯರ ಕರ್ತವ್ಯವಾಗಿದೆ. ಮೇವು ಜಾನುವಾರುಗಳ ಹಸಿವೆ ಇಂಗುವಷ್ಟು ಇರಬೇಕು. ಅಂದರೆ ಆಹಾರವು ಕಡಿಮೆಯೋ ಕಳಪೆಯೋ ಆಗಿರಬಾರದು.

♦ ಯಾತ್ರಾ ತಂಡದಿಂದ ಬೇರ್ಪಟ್ಟ ಯಾತ್ರಿಕರಿಗೆ ಮತ್ತಿತರ ಅವಶ್ಯಾರ್ಥಿಗಳಿಗಾಗಿ ಧರ್ಮಛತ್ರ ಮತ್ತು ಊಟದ ಮನೆಗಳನ್ನು ನಿರ್ಮಿಸಲಾಯಿತು. ಬಡವರು ಮತ್ತು ನಿರ್ಗತಿಕರಿಗಾಗಿ ಮನೆಗಳನ್ನು ನಿರ್ಮಿಸಿ ಕೊಡಲಾಯಿತು.

♦ ಬೇಸಾಯ, ಜಾನುವಾರುಗಳು ಮತ್ತು ಪ್ರಯಾಣಿಕರ ಉಪಯೋಗಕ್ಕೆ ಬೇಕಾಗಿ ಕಣಿವೆಗಳಲ್ಲಿ ಬಾವಿಗಳನ್ನು ನಿರ್ಮಿಸಲಾಯಿತು.

♦ ವಕ್ಫ್‌ನ ಆದಾಯವನ್ನು ರಸ್ತೆ, ಸೇತುವೆ, ದಾರಿಹೋಕರ ಸುರಕ್ಷೆ, ನಿರ್ಮಾಣ ಮತ್ತು ದುರಸ್ತಿಗಾಗಿ ವ್ಯಯಿಸಲಾಗುತ್ತಿತ್ತು. ಅನಾಥ ಮತ್ತು ನಿರ್ಗತಿಕ ಮಕ್ಕಳ ಪೋಷಣೆಗಾಗಿ ವಕ್ಫ್ ಸಂಸ್ಥೆಗಳನ್ನು ಮೀಸಲಿಡಲಾಯಿತು.

♦ ಉಪೇಕ್ಷಿತರು, ಅಂಧರು ಮತ್ತು ಅಪೇಕ್ಷಿತರ ಮೇಲ್ನೋಟಕ್ಕಾಗಿ ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ಅದರಲ್ಲಿ ಆಹಾರ, ವಸ್ತ್ರ, ವಿದ್ಯೆ ಮತ್ತಿತರ ವ್ಯವಸ್ಥೆಗಳನ್ನು ಮಾಡಲಾಯಿತು.

♦ ಕೈದಿಗಳ ಸ್ಥಿತಿಯನ್ನು ಉತ್ತಮಗೊಳಿಸಲಿಕ್ಕಾಗಿ, ಅವರ ಜೀವನ ಸುಧಾರಣೆಗಾಗಿ,

ಅವರಿಗೆ ಉತ್ತಮ ಆಹಾರ ಒದಗಿಸಲು ಮತ್ತು ಉತ್ತಮ ಆರೋಗ್ಯ ಮಟ್ಟ ಕಾಯ್ದುಕೊಳ್ಳಲಿಕ್ಕಾಗಿ ಹಲವು ಕ್ರಮಗಳನ್ನು ಕೈಗೊಳ್ಳಲಾಯಿತು.

♦ ಕೆಲವು ಸಂಸ್ಥೆಗಳ ಆದಾಯವನ್ನು ಅಂಧರ ಮತ್ತು ವಿಕಲಾಂಗರ ಸೇವೆಗೆ ವ್ಯಯಿಸಲಾಯಿತು. ಯುವಕ, ಯುವತಿಯರ ಮದುವೆಯ ವ್ಯವಸ್ಥೆಯನ್ನು ಮಾಡಲಾಯಿತು.

♦ ರೋಗಪೀಡಿತ ಜಾನುವಾರುಗಳ ಚಿಕಿತ್ಸೆ, ಮೇವು ಒದಗಣೆ ಮತ್ತು ಅಶಕ್ತ ಸ್ಥಿತಿಯಲ್ಲಿ ಅವುಗಳಿಗೆ ಮೇಯಲು ಹುಲ್ಲುಗಾವಲು ನಿರ್ಮಿಸಲಾಯಿತು.

♦ ಮಕ್ಕಳ ಪೋಷಣೆಯನ್ನು ಅತ್ಯುತ್ತಮವಾಗಿ ಮಾಡುವಂತಾಗಲು ಬಾಣಂತಿಯರಿಗೆ ವಿಶೇಷ ಸಹಾಯದ ವ್ಯವಸ್ಥೆ ಮಾಡಲಾಯಿತು. ಸುಲ್ತಾನ್ ಸಲಾಹುದ್ದೀನ್ ಅಯ್ಯೂಬಿಯವರು ತಮ್ಮ ಕೋಟೆಯ ದ್ವಾರದ ಬಳಿ ಎರಡು ಸಣ್ಣ ಕಾಲುವೆಗಳನ್ನು ರಚಿಸಿದ್ದರು. ಅವು ಈಗಲೂ ಡಮಾಸ್ಕಸ್‌ನಲ್ಲಿ ಇದೆ. ಒಂದರಲ್ಲಿ ಹಾಲು ಹರಿಯುತ್ತಿತ್ತು, ಇನ್ನೊಂದರಲ್ಲಿ ಶುದ್ಧ ಕುಡಿಯುವ ನೀರು. ಬಾಣಂತಿಯರು ವಾರದಲ್ಲಿ ಎರಡು ಬಾರಿ ಬಂದು ಅದರಿಂದ ಪ್ರಯೋಜನ ಪಡೆಯುತ್ತಿದ್ದರು.

ಹಾಗಾಗಿ ಮುಸ್ಲಿಮ್ ಸಮಾಜದಲ್ಲಿ ಯಾವೆಲ್ಲ ಸತ್ಕರ್ಮಗಳು ಆಗುತ್ತಿವೆಯೋ ಅವುಗಳ ಮೂಲಕ ಎಷ್ಟರ ಮಟ್ಟಿಗೆ ಒಳಿತುಗಳು ಹರಡಿವೆ ಮತ್ತು ಎಷ್ಟರ ಮಟ್ಟಿಗೆ ಸಮಾಜದಲ್ಲಿ ಬದಲಾವಣೆ ಆಗಿದೆ ಎಂಬುದನ್ನು ನೋಡಬೇಕಾಗಿದೆ.

**(ಈ) ಕೆಡುಕುಗಳ ನಿರ್ಮೂಲನ:** ಒಳಿತುಗಳನ್ನು ಹರಡುವ ಕಾರ್ಯವು ಕೆಡುಕಿನ ನಿರ್ಮೂಲನಕ್ಕೆ ಹೇತುವಾಗುತ್ತದೆ. ಸಮಾಜದಲ್ಲಿರುವ ಜನರೊಂದಿಗಿನ ನಮ್ಮ ಸಂಬಂಧವು ಕೆಡುಕುಗಳ ನಿರ್ಮೂಲನದ ನಿಟ್ಟಿನಲ್ಲಿ ಹೆಜ್ಜೆಯಿಡುವಂತೆಯೂ ಇರಬೇಕಾಗಿದೆ. ಅದರ ಕಾರಣವಾಗಿ ಅವರು ಸದಾ ನಮ್ಮೊಂದಿಗೆ ಸೇರಿ ಕೊಂಡಿರುವರು. ಉದಾಹರಣೆಗೆ: ಓರ್ವ ಮುಸ್ಲಿಮೇತರ ಸಹೋದರ ಒಂದು ಸಮಸ್ಯೆಯಲ್ಲಿ ಸಿಲುಕಿರುತ್ತಾನೆ. ಅವನ ಸಮಸ್ಯೆಯನ್ನು ಪರಿಹರಿಸುವ ಮನೋಭಾವ ನಮ್ಮಲ್ಲಿದ್ದರೆ, ಅವನೊಂದಿಗೆ ನಮ್ಮ ಸಂಬಂಧವು ಅಷ್ಟಕ್ಕಷ್ಟೇ ಇರುತ್ತದೆ. ಆದರೆ ಅವನ ಸಮಸ್ಯೆಯನ್ನು ನಿವಾರಿಸಲು ಪ್ರಯತ್ನಿಸಿದರೆ, ಅವನೊಂದಿಗೆ ನಮ್ಮ ಸಂಬಂಧವು ಗಾಢವಾಗುತ್ತದೆ.

ಮಕ್ಕಾವಾಸಿಗಳೊಂದಿಗಿನ ಪ್ರವಾದಿವರ್ಯರ(ಸ) ಸಂಬಂಧವು ಇದೇ ರೀತಿ ಇರುತ್ತಿತ್ತು. ಅವರು ಜನರ ಹಕ್ಕುಗಳನ್ನು ಕೊಡಿಸಲು ಪ್ರಯತ್ನಿಸುತ್ತಿದ್ದರು. ಯಾರದಾದರೂ ಹಕ್ಕುಚ್ಯುತಿ ಉಂಟಾದರೆ ಪ್ರವಾದಿವರ್ಯರಿಗೆ(ಸ) ತಿಳಿಸಲಾಗುತ್ತಿತ್ತು. ಭಾರತದಂತಹ

ಸಮ್ಮಿಶ್ರ ಸಮಾಜದಲ್ಲಿ ನಮ್ಮ ಪರಿಚಯವು ಹೀಗೆಯೇ ಇರಬೇಕು. ಅಂದರೆ ಜನರು ತಮ್ಮ ವಿವಿಧ ವ್ಯವಹಾರಗಳಿಗೆ ಸಂಬಂಧಿಸಿ ನಮ್ಮನ್ನು ಸಂಪರ್ಕಿಸು ವಂತಿರಬೇಕು. ನಾವು ಅವರ ಸಂಗಡಿಗರು ಮತ್ತು ಮಿತ್ರರು ಎಂದು ಅವರಿಗೆ ಮನವರಿಕೆಯಾಗಬೇಕು. ಪ್ರವಾದಿವರ್ಯರು(ಸ) ಮಕ್ಕಾದಲ್ಲಿ, ಯಾರಿಗೆ ಸಂರಕ್ಷಕರಿಲ್ಲವೋ ಅವರ ಸಂರಕ್ಷಕ ನಾನಾಗಿದ್ದೇನೆ ಎಂದು ಘೋಷಿಸಿದ್ದರು.

ಒಬ್ಬನಿಗೆ ಏನಾದರೂ ಸಮಸ್ಯೆ ಇದ್ದರೆ, ಯಾರಾದರೂ ಕೆಡುಕಿನಲ್ಲಿ ಸಿಲುಕಿದ್ದರೆ, ಕೆಟ್ಟ ಅಭ್ಯಾಸವನ್ನು ಬೆಳೆಸಿದ್ದರೆ, ಜಗಳಾಡುತ್ತಿದ್ದರೆ... ಈ ಎಲ್ಲ ಸಂದರ್ಭಗಳು ವೈಯಕ್ತಿಕ ಮತ್ತು ಸಾಮೂಹಿಕವಾದ ಕೆಡುಕಿನ ನಿರ್ಮೂಲನಕ್ಕೆ ದಾರಿ ಒದಗಿಸಿ ಕೊಡುತ್ತದೆ. ಅಂದರೆ ಒಬ್ಬನು ದುಷ್ಕರ್ಮವನ್ನೆಸಗುತ್ತಿದ್ದರೆ, ಅವನನ್ನು ಅದರಿಂದ ತಡೆಯುವುದು; ಕೆಲವು ಜನರು ಅಥವಾ ಸಮಾಜವು ಕೆಡುಕಿನಲ್ಲಿ ಬಿದ್ದಿದ್ದರೆ, ಅದರ ವಿರುದ್ಧವೂ ಹೋರಾಟವನ್ನು ಜಾರಿಯಲ್ಲಿರಿಸುವುದು...

ಈ ರೀತಿಯಾಗಿ, ಶಿರ್ಕ್, ಹೆತ್ತವರಿಗೆ ಅವಿಧೇಯತೆ, ಸಂಬಂಧಿಕರೊಂದಿಗೆ ದುರ್ವರ್ತನೆ, ಮಾನವ ಹಕ್ಕುಗಳ ಉಲ್ಲಂಘನೆ, ಬಡತನ, ನಿರುದ್ಯೋಗ, ಅಶ್ಲೀಲತೆ, ನಗ್ನತೆ, ಅಸೂಯೆ, ಭೌತಿಕತೆ ಮತ್ತು ಭ್ರಷ್ಟಾಚಾರ, ಸ್ತ್ರೀ ಪೀಡನೆ, ಉಚ್ಚ-ನೀಚತೆ, ಅಸ್ಪೃಶ್ಯತೆ, ವರ್ಗ ಸಂಘರ್ಷ ಮತ್ತು ಪಕ್ಷಪಾತ, ಪರಿಸರ ಮಾಲಿನ್ಯ, ನೈತಿಕ ಅಧಃಪತನ ಇತ್ಯಾದಿ ಕೆಡುಕುಗಳ ನಿರ್ಮೂಲನಕ್ಕೆ ಪ್ರಯತ್ನಿಸಬೇಕಾಗಿದೆ.

ಕೆಡುಕುಗಳನ್ನು ಕಂಡರೆ ಸಕಾಲದಲ್ಲಿ ಕಾರ್ಯಪ್ರವೃತ್ತರಾಗುವುದೇ ಅವುಗಳನ್ನು ನಿವಾರಿಸುವ ಅತ್ಯುತ್ತಮ ಮತ್ತು ಸ್ವಾಭಾವಿಕ ವಿಧಾನವಾಗಿದೆ. ಏನಾದರೂ ಕೆಡುಕು ಕಂಡರೆ ತಕ್ಷಣವೇ ಅತ್ಯುತ್ತಮ ರೀತಿಯಲ್ಲಿ ಅದನ್ನು ನಿವಾರಿಸಲು ಪ್ರಯತ್ನಿಸಬೇಕು. ಅದಕ್ಕಾಗಿ ಹಂತ ಹಂತವಾಗಿ ಪ್ರಯತ್ನಿಸಬೇಕೆಂದು ಅಲ್ಲಾಹನ ಸಂದೇಶವಾಹಕರು(ಸ) ಉಪದೇಶಿಸಿದ್ದಾರೆ.

ಮೊದಲ ಹಂತ, ಕೆಡುಕು ಕಂಡ ಕೂಡಲೇ ಅಥವಾ ಕೆಡುಕು ಎಂದು ಅರಿವಾದ ಕೂಡಲೇ ಅದನ್ನು ನಿವಾರಿಸಲು ಪ್ರಯತ್ನಿಸಬೇಕು. ಅಂದರೆ, ನಿಮ್ಮ ಪೈಕಿ ಯಾರಾದರೂ ಕೆಡುಕು ಕಂಡರೆ ಅದನ್ನು ಕೈಯಿಂದ ತಡೆಯಬೇಕು.

ಎರಡನೆಯ ಹಂತ, ಒಬ್ಬನು ಕೈಯಿಂದ ಕೆಡುಕನ್ನು ನಿವಾರಿಸುವಷ್ಟು ಶಕ್ತನಲ್ಲದಿದ್ದರೆ, ಅವನು ತನ್ನ ಬಾಯಿಯ (ಮಾತಿನ) ಮೂಲಕ ಅದನ್ನು ತಡೆಯಲು ಪ್ರಯತ್ನಿಸಲಿ ಎಂದು ಪ್ರವಾದಿವರ್ಯರು(ಸ) ಹೇಳಿದ್ದಾರೆ.

ಮೂರನೆಯ ಹಂತ, 'ಯಾರಾದರೂ ಅಷ್ಟನ್ನೂ ಮಾಡಲು ಶಕ್ತರಲ್ಲವಾದರೆ, ಕನಿಷ್ಠ ತನ್ನ ಮನಸ್ಸಿನಲ್ಲಾದರೂ ಆ ಕೆಡುಕನ್ನು ಕೆಡುಕೆಂದು ಭಾವಿಸಲಿ' ಎಂದು ಹೇಳಿದ್ದಾರೆ.

ಒಬ್ಬನು ಕೆಡುಕನ್ನು ನಿವಾರಿಸಿದನೆಂದರೆ, ಅವನಲ್ಲಿ ಈಮಾನ್ (ವಿಶ್ವಾಸ) ಗಟ್ಟಿ ಇದೆ ಎಂದರ್ಥ. ಒಬ್ಬನು ಕೆಡುಕನ್ನು ಕಂಡು ಅದು ಕೆಡುಕೆಂದು ಭಾವಿಸಿದರೆ ಅವನ ಈಮಾನ್ ದುರ್ಬಲವಾಗಿದೆ ಎಂದರ್ಥ. ಪ್ರವಾದಿವರ್ಯರು(ಸ), 'ಅವನು ಮನಸ್ಸಿನಲ್ಲಾದರೂ ಕೆಡುಕನ್ನು ಕೆಡುಕೆಂದು ಭಾವಿಸಲಿ' ಎಂದು ಹೇಳಿದ ಬಳಿಕ, 'ಅದು ಈಮಾನಿನ ದುರ್ಬಲ ಹಂತವಾಗಿದೆ' ಎಂದು ಬಣ್ಣಿಸಿದ್ದಾರೆ.

ಹಾಗಾಗಿ ನಾವು ಇರುವ ಕಡೆ ಕೆಡುಕು ಇರಲೇ ಬಾರದೆಂಬುದು ನಮ್ಮ ಪ್ರಯತ್ನವಾಗಬೇಕು. ಒಂದೋ ಕೆಡುಕನ್ನು ಅಳಿಸಬೇಕು, ಇಲ್ಲವೇ ಅದರ ವಿರುದ್ಧ ಜನರ ಅಭಿಪ್ರಾಯ ಕಲೆ ಹಾಕಲು ಪ್ರಯತ್ನಿಸಬೇಕು. ಒಂದು ವೇಳೆ ಕೆಡುಕನ್ನು ನಿವಾರಿಸಲಾಗದಿದ್ದರೆ, ಅದರ ಪ್ರಭಾವ ಕೇವಲ ಕೆಡುಕು ಎಸಗುವವರ ಮೇಲಷ್ಟೇ ಆಗುವುದಲ್ಲ, ಬದಲಾಗಿ ಇಡೀ ಸಮಾಜದ ಮೇಲಾಗುವುದು.

وَاتَّقُوا فِتْنَةً لَّا تُصِيبَنَّ الَّذِينَ ظَلَمُوا مِنكُمْ خَاصَّةً ۖ
وَاعْلَمُوا أَنَّ اللَّهَ شَدِيدُ الْعِقَابِ

"ಯಾವುದರ ಪರಿಣಾಮವು ನಿಮ್ಮ ಪೈಕಿ ಪಾಪ ಮಾಡಿದವರಿಗೆ ಮಾತ್ರ ಸೀಮಿತವಾಗಿರಲಾರದೋ ಆ ಪೀಡನೆಯಿಂದ ನೀವು ದೂರವಿರಿ. ಅಲ್ಲಾಹ್ ಕಠಿಣವಾಗಿ ಶಿಕ್ಷಿಸುವನೆಂಬುದನ್ನು ತಿಳಿದುಕೊಳ್ಳಿರಿ." (ಅಲ್ ಅನ್ಫಾಲ್: 25)

ಅಲ್ಲಾಹನ ಸಂದೇಶವಾಹಕರು(ಸ) ಈ ರೀತಿ ಹೇಳಿರುವರು, "ಒಂದು ಸಮುದಾಯದಲ್ಲಿ ಅಪ್ರಾಮಾಣಿಕತೆ ಕಾಣಿಸತೊಡಗಿದರೆ, ಅಲ್ಲಾಹ್ ಅವರ ಹೃದಯದಲ್ಲಿ ಅಹಂಕಾರವನ್ನು ಹುಟ್ಟಿಸುತ್ತಾನೆ. ಒಂದು ಸಮುದಾಯದಲ್ಲಿ ವ್ಯಭಿಚಾರ ವ್ಯಾಪಕವಾದರೆ ಅಲ್ಲಿ ಮರಣದ ಪ್ರಮಾಣವು ಹೆಚ್ಚುತ್ತದೆ. ತೂಕ-ಅಳತೆಯಲ್ಲಿ ಮೋಸ ಮಾಡುವ ಸಮುದಾಯದ ಆಹಾರವನ್ನು ಕಡಿತಗೊಳಿಸಲಾಗುತ್ತದೆ. ಸತ್ಯದ ವಿರುದ್ಧ ತೀರ್ಮಾನ ತಳೆಯುವ ಸಮುದಾಯದಲ್ಲಿ ರಕ್ತಪಾತವು ವ್ಯಾಪಕವಾಗುತ್ತದೆ. ಒಪ್ಪಂದವನ್ನು ಉಲ್ಲಂಘಿಸುವ ಸಮುದಾಯದ ಮೇಲೆ ಶತ್ರುಗಳ ಆಕ್ರಮಣ ಹೆಚ್ಚುತ್ತದೆ."

[ವರದಿ: ಇಬ್ನು ಅಬ್ಬಾಸ್(ರ) - ಮೂತಾ ಇಮಾಮ್ ಮಾಲಿಕ್]

ಒಳಿತುಗಳನ್ನು ಹರಡುವುದು ಮತ್ತು ಕೆಡುಕುಗಳನ್ನು ತಡೆಯುವುದು ಮುಸ್ಲಿಮ್ ಸ್ತ್ರೀ-ಪುರುಷರೆಲ್ಲರ ಕರ್ತವ್ಯವಾಗಿದೆ. ಈ ಪ್ರಮುಖ ಹೊಣೆಗಾರಿಕೆಯ ಕುರಿತು ವಿಶೇಷ ಗಮನವನ್ನು ಹರಿಸಬೇಕು. ಬೆಳಗಾಗುತ್ತಲೇ ತನ್ನ ಉದ್ಯೋಗ ಮತ್ತು ಮನೆಯ ಕೆಲಸ ಕಾರ್ಯಗಳ ಚಿಂತೆ ಆಗುವಂತೆ, ಇವತ್ತು ಯಾವ ರೀತಿಯಲ್ಲಿ ಒಳಿತುಗಳನ್ನು ಹರಡಬೇಕು ಮತ್ತು ಕೆಡುಕನ್ನು ತಡೆಯಬೇಕು ಎಂಬ ಕುರಿತೂ ಚಿಂತನೆ ನಡೆಯಬೇಕು. ದಿನದ ಕೆಲಸಕಾರ್ಯಗಳನ್ನು ಸರಿಯಾಗಿ ನಿಭಾಯಿಸಲಿಕ್ಕಾಗಿ ಕೆಲಸಗಳ ಕೋಷ್ಟಕವನ್ನು ತಯಾರಿಸುವಂತೆಯೇ, ಒಳಿತುಗಳನ್ನು ಹರಡಲು ಮತ್ತು ಕೆಡುಕನ್ನು ತಡೆಯಲು ಕೂಡ ಪಟ್ಟಿಯನ್ನು ತಯಾರಿಸಬೇಕು. ವಸ್ತುತಃ ಒಳಿತುಗಳ ಪ್ರಸಾರ ಮತ್ತು ಕೆಡುಕುಗಳ ನಿವಾರಣೆಯಲ್ಲಿ ತೊಡಗಿಕೊಳ್ಳುವುದರಿಂದಲೇ ನಮ್ಮ ಇಹ-ಪರಗಳ ಯಶಸ್ಸು ಅಡಗಿದೆ.

ಅಲ್ಲಾಹನ ಸಂದೇಶವಾಹಕರು(ಸ) ಹೇಳುತ್ತಾರೆ, "ನನ್ನ ಪ್ರಾಣ ಯಾರ ಕೈಯಲ್ಲಿದೆಯೋ ಅವನಾಣೆ! ನೀವು ಖಂಡಿತವಾಗಿಯೂ ಒಳಿತುಗಳನ್ನು ಆದೇಶಿಸುತ್ತಿರಬೇಕು ಮತ್ತು ಕೆಡುಕುಗಳಿಂದ ತಡೆಯುತ್ತಿರಬೇಕು. ಅನ್ಯಥಾ ಅಲ್ಲಾಹನು ನಿಮ್ಮ ಮೇಲೆ ತನ್ನ ಕಡೆಯಿಂದ ಯಾತನೆಯನ್ನು ಎರಗಿಸುವ ಕಾಲ ಸನ್ನಿಹಿತವಾದ ಮೇಲೆ, ನೀವು ಅವನಲ್ಲಿ ಪ್ರಾರ್ಥಿಸಿದರೆ ನಿಮ್ಮ ಪ್ರಾರ್ಥನೆಯು ಸ್ವೀಕೃತವಾಗಲಾರದು."

[ವರದಿ: ಹುದೈಫ(ರ) - ತಿರ್ಮಿದಿ]

## ಪ್ರವಾದಿವರ್ಯರ(ಸ) ಮತ್ತು ಸಹಾಬಿಗಳ(ರ) ಸಂದೇಶ ಪ್ರಚಾರ

ಜನರನ್ನು ಅಲ್ಲಾಹನ ಕಡೆಗೆ ಆಹ್ವಾನಿಸಲು ಮತ್ತು ಅವರ ನಡುವೆ ಒಳಿತುಗಳನ್ನು ಹರಡಲು ಹಾಗೂ ಕೆಡುಕುಗಳಿಂದ ತಡೆಯಲು ಪ್ರವಾದಿವರ್ಯರು(ಸ) ಎಷ್ಟು ಕಾಳಜಿಯಿಂದ ಪ್ರಯತ್ನಿಸುತ್ತಿದ್ದರೆಂದರೆ, ಅದರ ಚಿಂತೆಯಿಂದಲೇ ಅವರು ತೊಂದರೆಯಲ್ಲಿ ಸಿಲುಕಿ ಬಿಡುವರೋ ಎಂದು ಜನರು ಆತಂಕ ಪಡುತ್ತಿದ್ದರು.

ಅವರ ಈ ಕಾಳಜಿ ಮತ್ತು ಕಳಕಳಿಯನ್ನು ಅಲ್ಲಾಹ್ ಈ ರೀತಿ ಬಣ್ಣಿಸಿದ್ದಾನೆ,

فَلَعَلَّكَ بَاخِعٌ نَّفْسَكَ عَلَىٰٓ آثَارِهِمْ إِن لَّمْ يُؤْمِنُوا بِهَٰذَا الْحَدِيثِ أَسَفًا ۝٦

"ಓ ಪೈಗಂಬರರೇ, ಇವರು ಈ ಬೋಧನೆಯ ಮೇಲೆ ವಿಶ್ವಾಸವಿರಿಸದಿದ್ದರೆ ಪ್ರಾಯಶಃ ನೀವು ಇವರ ಹಿಂದೆ ವ್ಯಥೆಯಿಂದ ನಿಮ್ಮ ಜೀವನವನ್ನೇ ಕಳೆದುಕೊಳ್ಳುವವರಿದ್ದೀರಿ." (ಅಲ್ ಕಹ್ಫ್: 6)

ಸಹಾಬಿಗಳೂ ಬಹಳವಾಗಿ ಸಂದೇಶ ಪ್ರಚಾರ ಕಾರ್ಯ ಕೈಗೊಳ್ಳುತ್ತಿದ್ದರು. ಕೆಲವು

ಉದಾಹರಣೆಗಳನ್ನು ಈ ಕೆಳಗೆ ಕೊಡುತ್ತಿದ್ದೇವೆ:

♦ ಮುಸ್‌ಅಬ್ ಬಿನ್ ಉಮೈರ್(ರ), ಜಅ್‌ಫರ್ ತಯ್ಯಾರ್(ರ), ಅಬೂ ಉಬೈದಾ ಬಿನ್ ಜರ್‍ರಾಹ್(ರ) ಇವರೆಲ್ಲ ಬಹಳ ಜ್ಞಾನವುಳ್ಳವರಾಗಿದ್ದರು. ಇವರು ಮದೀನ, ಇತಿಯೋಪಿಯಾ ಮತ್ತು ನಜ್ರಾನ್‌ಗಳ ನಿವಾಸಿಗಳನ್ನು ತಮ್ಮ ಹೃದಯಸ್ಪರ್ಶಿ ಭಾಷಣ ಮತ್ತು ಉಪದೇಶಗಳಿಂದ ಸತ್ಯದೆಡೆಗೆ ಕರೆ ತಂದಿದ್ದರು.

♦ ಝುಬೈರ್(ರ), ತಲ್ಹಾ(ರ), ಅಮ್ಮಾರ್(ರ) ಮತ್ತು ಯಾಸಿರ್(ರ)ರಂತಹ ಸಹಾಬಿಗಳು ದೇವಮಾರ್ಗದಲ್ಲಿ ಜೀವ ಅರ್ಪಿಸುವಂತಹ ಅನುಪಮ ಮಾದರಿಯನ್ನು ತೋರಿಸಿ ಕೊಟ್ಟಿದ್ದರು. ಅವರಂತಹ ತ್ಯಾಗ-ಬಲಿದಾನದ ಉದಾಹರಣೆಯು ಬಳಿಕದ ಶತಮಾನಗಳಲ್ಲಿ ಎಲ್ಲಿಯೂ ಸಿಗಲಾರದು.

♦ ಲಬೀದ್(ರ), ಸುವೈದ್ ಬಿನ್ ಸಾಮಿತ್(ರ) ಅಬೂದರ್ರ್ ಗಿಫ್ಫಾರಿ(ರ) ಇವರಂತಹ ವಾಕ್ಪಟುಗಳು ಹುಟ್ಟಿ ಬಂದರು. ಅವರ ಒಂದು ಭಾಷಣ ಅಥವಾ ಕವನದಿಂದ ಅನೇಕ ಗೋತ್ರಗಳು ಇಸ್ಲಾಮ್‌ಗೆ ಅಧೀನವಾಗುತ್ತಿದ್ದುವು.

♦ ಉಮ್ಮು ಶುರೈಕ್(ರ)ರನ್ನು ಯಾವುದೇ ಆಧಾರವಿಲ್ಲದೆ ಒಂಟೆಯ ಮೇಲೆ ಕೂರಿಸಿ, ಉರಿಯುವ ಬಿಸಿಲಿನಲ್ಲಿ ನಿಲ್ಲಿಸಲಾಗುತ್ತಿತ್ತು. ತೀವ್ರ ಸೆಖೆಯ ಸಮಯದಲ್ಲೂ ಉಷ್ಣಾಹಾರ (ಒಣ ರೊಟ್ಟಿ ಮತ್ತು ಜೇನು) ನೀಡಲಾಗುತ್ತಿತ್ತು. ನೀರು ಯಾವ ಕಾರಣಕ್ಕೂ ನೀಡುತ್ತಿರಲಿಲ್ಲ. ಆದರ ಹೊರತಾಗಿಯೂ ಅಲ್ಲಾಹನ ಈ ದಾಸಿಯು ಸಹನೆ-ದೃಢತೆಗೆ ಅತ್ಯುತ್ತಮ ಸಾಕ್ಷಿಯಾಗಿದ್ದರು. ಇತರೆಲ್ಲ ಪರೀಕ್ಷೆಗಳಿಗೆದುರು ಇಸ್ಲಾಮಿನ ಜೀವನಕ್ಕೆ ಆದ್ಯತೆ ನೀಡಿದರು. ತಮ್ಮ ಸಂದೇಶ ಪ್ರಚಾರದ ಪ್ರಯತ್ನಗಳನ್ನು ಮುಂದು ವರಿಸಿದ್ದರು.

♦ ಹಾರಿಸ್‌ರ ಪುತ್ರಿ ಉಮ್ಮು ಹಕೀಮ್(ರ)ರ ವಿವಾಹವು ಅಬೂಜಹಲ್‌ನ ಪುತ್ರ ಇಕ್ರಿಮರೊಂದಿಗೆ ಆಗಿತ್ತು. ಉಮ್ಮು ಹಕೀಮ್(ರ) ಮಕ್ಕಾ ವಿಜಯದ ವೇಳೆ ಇಸ್ಲಾಮ್ ಸ್ವೀಕರಿಸಿದರು. ಅವರ ಪತಿ ಇಕ್ರಿಮ ಬಿನ್ ಅಬೂಜಹಲ್ ಯಮನ್‌ಗೆ ಪಲಾಯನ ಮಾಡಿದ್ದರು. ಉಮ್ಮು ಹಕೀಮ್(ರ)ರವರು ಯಮನ್‌ಗೆ ಪ್ರಯಾಣ ಹೊರಟರು. ಪತಿಗೆ ಇಸ್ಲಾಮಿನ ಸಂದೇಶ ನೀಡಿದರು. ಕೊನೆಗೆ ಇಕ್ರಿಮಾ(ರ) ಕೂಡ ಮುಸ್ಲಿಮರಾಗಿ ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಹಾಜರಾದರು. ಆಗ ಪ್ರವಾದಿವರ್ಯರು(ಸ) ಅವರನ್ನು ನೋಡಿ ಬಹಳ ಸಂತೋಷವನ್ನು ವ್ಯಕ್ತಪಡಿಸಿದರು.

♦ ಒಳಿತಿನ ಆದೇಶ ಮತ್ತು ಕೆಡುಕಿನ ನಿರ್ಮೂಲನದ ಕಾರ್ಯದಲ್ಲಿ ಪ್ರಭಾವಿ

ವನಿತಾ ಸಹಾಬಿಗಳು ಬಹಳ ಉತ್ಸಾಹದಿಂದ ತೊಡಗಿಕೊಳ್ಳುತ್ತಿದ್ದರು. ಆಯಿಶಾ(ರ)ರವರು ಒಂದು ಮನೆಯಲ್ಲಿ ಅತಿಥಿಯಾಗಿ ತಂಗಿದ್ದರು. ಆತಿಥೇಯರ ಇಬ್ಬರು ಯುವ ಹೆಣ್ಮಕ್ಕಳು ಚದ್ದರ ಹೊದ್ದುಕೊಳ್ಳದೆ ನಮಾಝ್ ನಿರ್ವಹಿಸುತ್ತಿದ್ದರು. ಅದನ್ನು ಕಂಡು ಆಯಿಶಾ(ರ)ರವರು, "ಚದ್ದರ ಹೊದ್ದುಕೊಳ್ಳದೆ ನಮಾಝ್ ನಿರ್ವಹಿಸಬಾರದು, ಅಲ್ಲಾಹನ ಸಂದೇಶವಾಹಕರು(ಸ) ಇದನ್ನು ಕಲಿಸಿದ್ದಾರೆ" ಎಂದು ಅವರಿಗೆ ತಾಕೀತು ಮಾಡಿದರು.

♦ ಫಾತಿಮಾ ಬಿಂತಿ ಖತ್ತಾಬ್(ರ)ರವರು ಇಸ್ಲಾಮಿನಲ್ಲಿ ದೃಢರಾಗಿದ್ದುದೇ ಉಮರ್ ಬಿನ್ ಖತ್ತಾಬ್(ರ)ರನ್ನು ಇಸ್ಲಾಮನ್ನು ಅರಿಯಲು ಪ್ರೇರೇಪಿಸಿತ್ತು.

♦ ಉಮ್ಮು ಶುರೈಕ್(ರ)ರವರು ಇಸ್ಲಾಮಿನ ಆರಂಭ ಕಾಲದಲ್ಲಿ ರಹಸ್ಯವಾಗಿ ಕುರೈಶ್ ಸ್ತ್ರೀಯರಿಗೆ ಇಸ್ಲಾಮಿನ ಸಂದೇಶವನ್ನು ನೀಡುತ್ತಿದ್ದರು. ಅವರ ಪ್ರಯತ್ನಗಳಿಂದಲೇ ಕುರೈಶ್ ಸ್ತ್ರೀಯರಲ್ಲಿ ಇಸ್ಲಾಮ್ ಪಸರಿಸಿತ್ತು. ಆದರೆ ಕುರೈಶರಿಗೆ ಅವರ ಸಂದೇಶ ಪ್ರಚಾರ ಕಾರ್ಯದ ಬಗ್ಗೆ ತಿಳಿದು ಬಂದಾಗ, ಅವರನ್ನು ಮಕ್ಕಾದಿಂದ ಹೊರ ಹಾಕಿದರು.

♦ ಉಮ್ಮು ಸುಲೈಮ್(ರ)ರವರ ಸಂದೇಶ ಪ್ರಚಾರದಿಂದಲೇ ಅಬೂ ತಲ್ಹಾ(ರ) ಇಸ್ಲಾಮ್ ಸ್ವೀಕರಿಸಿದ್ದರು.

ಕೆಡುಕುಗಳನ್ನು ಅಳಿಸುವ ಕಾರ್ಯವು ನಮ್ಮ ದಿನನಿತ್ಯದ ಪ್ರಯತ್ನಗಳ ಒಂದು ಭಾಗವಾಗಬೇಕು. ಒಂದರ್ಥದಲ್ಲಿ ಸಮಾಜದಲ್ಲಿರುವ ಕೆಡುಕುಗಳು ನಮ್ಮನ್ನು ಕೆಣಕುತ್ತಿವೆ ಎಂದು ಭಾವಿಸಬೇಕು. ಒಂದೋ ಆ ಕೆಡುಕನ್ನು ಅಳಿಸಬೇಕು ಇಲ್ಲವೇ ಜನರಲ್ಲಿ ಅದರ ಕುರಿತು ಜಾಗೃತಿ ಮೂಡಿಸಬೇಕು. ಸಮಾಜದಲ್ಲಿ ಹರಡುವ ಕೆಡುಕುಗಳ ಮೇಲೆ ಗಾಢ ವಾದ ದೃಷ್ಟಿ ಇರಿಸಬೇಕು. ಎಂದಾದರೂ ಪತ್ರಿಕೆಯಲ್ಲಿ ಕೆಡುಕಿನ ಬಗ್ಗೆ ಪ್ರಸ್ತಾಪ ಬಂದರೆ, ಆ ಪತ್ರಿಕೆಯು ನಮ್ಮ ಪಾಲಿಗೆ ಜನರಿಂದ ಬಂದ ದೂರು ಎಂದು ಭಾವಿಸಬೇಕು. ಇದರ ಕುರಿತು ಸೂಕ್ತ ಕ್ರಮ ಕೈಗೊಳ್ಳಲು ಮುಂದಾಗಬೇಕು. ಟಿ.ವಿ.ಯಲ್ಲಿ ಪ್ರಸಾರಗೊಳ್ಳುವ ವರದಿಗಳಲ್ಲಿ ಏನಾದರೂ ಕೆಡುಕು ಹರಡುವ ಮಾಹಿತಿ ದೊರೆತರೆ, ಅದನ್ನು ಕೂಡ ಒಂದು ಘೋಷಣೆಯಾಗಿ ಕಾಣಬೇಕು. ಇದರ ಕಡೆಗೂ ಸಮುದಾಯದ ಮಂದಿ ಗಮನ ಹರಿಸಬೇಕು ಮತ್ತು ಈ ಕೆಡುಕನ್ನು ದೂರೀಕರಿಸಲು ಪ್ರಯತ್ನಿಸಬೇಕು.

ಒಟ್ಟಿನಲ್ಲಿ ನಿಷ್ಕಳಂಕತೆ ಮತ್ತು ಅಲ್ಲಾಹನಿಗಾಗಿ ಕೆಡುಕುಗಳನ್ನು ನಿವಾರಿಸುವ ಪ್ರಯತ್ನವು ನಮ್ಮ ಅಸ್ತಿತ್ವದ ಒಂದು ಭಾಗವಾಗಿ ಬಿಡಬೇಕು. ಅನ್ಯಥಾ ಅಲ್ಲಾಹನ ಸಂದೇಶವಾಹಕರ(ಸ) ಈ ಎಚ್ಚರಿಕೆಯು ನಮ್ಮ ಮೇಲೆಯೂ ಎರಗಬಹುದು, ಒಂದು

ಜನಾಂಗದ ವ್ಯಕ್ತಿಯೊಬ್ಬನು ಜನಾಂಗದ ನಡುವೆ ಕೆಡುಕುಗಳನ್ನೆಸಗುತ್ತಿದ್ದು, ಅದನ್ನು ತಡೆಯುವ ಶಕ್ತಿಯಿದ್ದೂ ಅವನನ್ನು ತಡೆಯದಿದ್ದರೆ, ಅವರ ಮರಣಕ್ಕೆ ಮುಂಚೆ ಅವರೆಲ್ಲರ ಮೇಲೆ ಅಲ್ಲಾಹನು ತನ್ನ ಯಾತನೆಯನ್ನು ಎರಗಿಸುವನು.

[ವರದಿ: ಜರೀರ್ ಬಿನ್ ಅಬ್ದುಲ್ಲಾ(ರ) - ಅಬೂದಾವೂದ್, ಇಬ್ನು ಮಾಜಃ]

## 4. ಮಾದರಿ ಸಮಾಜದ ನಿರ್ಮಾಣ

ಜಗತ್ತಿನಲ್ಲಿ ಅತ್ಯುತ್ತಮ ಸಮುದಾಯ ಎನಿಸಿಕೊಳ್ಳಲಿಕ್ಕಿರುವ ನಾಲ್ಕನೆಯ ಬೇಡಿಕೆ ಯಾಗಿದೆ ಇದು. ಮಾನವರನ್ನು ಅಲ್ಲಾಹನ ಧರ್ಮದ ಕಡೆಗೆ ಆಹ್ವಾನಿಸುವ ಕಾರ್ಯವು ಅತ್ಯುತ್ಸಾಹ ಮತ್ತು ದೃಢ ಸಂಕಲ್ಪವನ್ನು ಅಪೇಕ್ಷಿಸುತ್ತದೆ; ಜತೆಗೆ ಜನರಿಗೆ ಅತ್ಯಂತ ಭವ್ಯ ವಾದ ಒಂದು ಭವಿಷ್ಯದ ಸುವಾರ್ತೆಯನ್ನೂ ನೀಡುವುದು ಕೂಡ ಅಗತ್ಯ. ಆದಕ್ಕಾಗಿ, ಯಾವ ಧರ್ಮದ ಸಂದೇಶವನ್ನು ನಾವು ನೀಡುತ್ತಿದ್ದೇವೆಯೋ ಅದು ಅಲ್ಲಾಹನ ಧರ್ಮವಾಗಿದೆ, ಯಾರನ್ನು ನಾವು ಅಭಿಸಂಬೋಧಿಸುತ್ತೇವೆಯೋ ಅವರು ಅಲ್ಲಾಹನ ದಾಸರಾಗಿದ್ದಾರೆ ಮತ್ತು ಈ ಕಾರ್ಯದಲ್ಲಿ ಬೇರಾರೂ ಅಲ್ಲ, ಬದಲಾಗಿ ಸ್ವಯಂ ಅಲ್ಲಾಹನೇ ನಮ್ಮ ಜತೆಗಿರುತ್ತಾನೆ ಎಂಬ ಸಂಪೂರ್ಣ ಭರವಸೆ ನಮ್ಮಲ್ಲಿರಬೇಕು.

وَالَّذِيْنَ جَاهَدُوْا فِيْنَا لَنَهْدِيَنَّهُمْ سُبُلَنَا ۚ وَاِنَّ اللّٰهَ لَمَعَ الْمُحْسِنِيْنَ

"ನಮಗಾಗಿ ಹೋರಾಡುವವರಿಗೆ ನಾವು ನಮ್ಮ ಮಾರ್ಗಗಳನ್ನು ತೋರಿಸಿ ಕೊಡುವೆವು ಮತ್ತು ನಿಶ್ಚಯವಾಗಿಯೂ ಅಲ್ಲಾಹ್ ಸಜ್ಜನರ ಜೊತೆಯಲ್ಲೇ ಇದ್ದಾನೆ."

(ಅಲ್ ಅಂಕಬೂತ್: 69)

ಪ್ರವಾದಿವರ್ಯರ(ಸ) ಜೀವನವು ಈ ಮನೋಭಾವದ ಭವ್ಯ ಉದಾಹರಣೆ ಯಾಗಿದೆ. ಮಕ್ಕಾ ಜೀವನದ ಆರಂಭ ಕಾಲದಲ್ಲಿ ಪ್ರವಾದಿವರ್ಯರು(ಸ), "ನೀವು ಇಸ್ಲಾಮ್ ಸ್ವೀಕರಿಸಿದರೆ, ಅರಬರೂ ಅರಬೇತರರೂ ನಿಮ್ಮ ಅಧೀನಕ್ಕೆ ಬರುವರು" ಎಂದು ಜನರಿಗೆ ಸುವಾರ್ತೆ ನೀಡಿದ್ದರು. ಹಿಜ್ರತ್‌ನ ಸಂದರ್ಭದಲ್ಲಿ ಸೌರ್ ಗುಹೆಯಿಂದ ಮದೀನದ ಕಡೆಗೆ ಸಾಗುತ್ತಿದ್ದಾಗ, ಸುರಾಕಾರಿಗೆ, "ನಿಮ್ಮ ಘನತೆ ನೋಡಿ! ಕಿಸ್ರಾನ ಕಂಕಣ ನಿಮ್ಮ ಕೈಯಲ್ಲಿ ರಾರಾಜಿಸುವುದು" ಎಂದು ಸುವಾರ್ತೆ ನೀಡಿದ್ದರು.

ಪ್ರವಾದಿವರ್ಯರು(ಸ) ಪ್ರಕಾಶಮಾನ ಭವಿಷ್ಯದ ಸುವಾರ್ತೆ ನೀಡುತ್ತಾ, "ಒಂದು ದಿನ ಆಗತವಾಗಲಿದೆ. ಇಂತಿಂತಹ ಸಾಮ್ರಾಜ್ಯಗಳು ಇಸ್ಲಾಮಿನ ಅಧೀನಕ್ಕೆ ಬರುವುದು. ಓರ್ವ ಯುವತಿ ಒಬ್ಬಂಟಿಯಾಗಿ, ಮೈತುಂಬಾ ಚಿನ್ನದ ಒಡವೆಗಳನ್ನು ಧರಿಸಿಕೊಂಡು

ಸನ್‌ಆದಿಂದ ಹದರ್‌ಮೂತ್ ವರೆಗೆ ಪ್ರಯಾಣ ಕೈಗೊಳ್ಳುವಳು. ಅವಳಿಗೆ ಅಲ್ಲಾಹನ ಹೊರತು ಬೇರೆ ಯಾರದೇ ಭಯವಿರಲಾರದು" ಎಂದು ಹೇಳಿದ್ದರು. ನೀವು ಪ್ರವಾದಿ ಚರಿತ್ರೆಯನ್ನು ಅಭ್ಯಸಿಸಿದರೆ, ಇಂತಹ ಹಲವಾರು ಉನ್ನತ ಸಂಕಲ್ಪ ಮತ್ತು ಭವ್ಯ ಭವಿಷ್ಯದ ಸುವಾರ್ತೆಗಳನ್ನು ಕಾಣಬಲ್ಲಿರಿ.

ಅಲ್ಲದೆ, ಸಮಾಜದ ಪ್ರಭಾವಿ ಜನರು ಇಸ್ಲಾಮಿನ ಪರಿಧಿಯೊಳಗೆ ಪ್ರವೇಶಿಸಬೇಕು ಎಂದು ಪ್ರವಾದಿವರ್ಯರು(ಸ) ಆಗ್ರಹಿಸುತ್ತಿದ್ದರು. ಉಮರ್ ಬಿನ್ ಖತ್ತಾಬ್(ರ) ಮತ್ತು ಖಾಲಿದ್ ಬಿನ್ ವಲೀದ್(ರ)ರ ಕುರಿತಾಗಿ, ಅವರಿಗೆ ಇಸ್ಲಾಮಿನ ಅನುಗ್ರಹ ದೊರೆಯಲಿ ಎಂದು ಪ್ರಾರ್ಥಿಸುತ್ತಿದ್ದರು. ಹೀಗೆ ಉಮರ್(ರ) ಇಸ್ಲಾಮ್ ಸ್ವೀಕರಿಸಿದಾಗ ಮೊತ್ತ ಮೊದಲಿಗೆ ಸಾಮಾನ್ಯ ಮುಸ್ಲಿಮರು ಕಅಬಾದಲ್ಲಿ ಬಹಿರಂಗವಾಗಿ ನಮಾಝ್ ನಿರ್ವಹಿಸಿದರು. ಏಕೆಂದರೆ ಸಮಾಜದಲ್ಲಿ ಉಮರ್(ರ)ರವರ ಪ್ರಭಾವ ಅಷ್ಟಿತ್ತು.

ಆಗ್ರಹಗಳು ಮೂಲತಃ ಮನದಾಳದ ಭಾವನೆಗಳ ಪ್ರಕಟನೆಯಾಗಿರುತ್ತವೆ. ಒಬ್ಬ ವ್ಯಕ್ತಿಗೆ, ನಾನು ಅಲ್ಲಾಹನ ಧರ್ಮದ ಕೆಲಸವನ್ನು ಅಲ್ಲಾಹನಿಗಾಗಿ ಮಾಡುತ್ತಿದ್ದೇನೆ ಎಂದು ಖಾತ್ರಿಯಿದ್ದರೆ, ಅವನಿಗೆ ಅಲ್ಲಾಹನ ಸಹಾಯದ ಬಗ್ಗೆಯೂ ಅಪಾರ ಭರವಸೆ ಇರುತ್ತದೆ. ಹೀಗೆ ದೊಡ್ಡ ದೊಡ್ಡ ಕನಸು ಕಾಣುವುದು ಮತ್ತು ದೊಡ್ಡ ದೊಡ್ಡ ಆಗ್ರಹ ಗಳನ್ನು ಹೊಂದುವುದು ಅವನ ಮಟ್ಟಿಗೆ ಸ್ವಾಭಾವಿಕವಾಗಿರುತ್ತದೆ. ಏಕೆಂದರೆ ಅಲ್ಲಾಹನ ಸಹಾಯದಿಂದ ಯಶಸ್ಸು ಖಂಡಿತ ದೊರೆಯುವುದು ಎಂದು ಅವನು ತಿಳಿದಿರುತ್ತಾನೆ. ನಾವು ಕೂಡ ಅಲ್ಲಾಹನ ಧರ್ಮದ ಪ್ರಚಾರ ಮತ್ತು ಪ್ರಸಾರಕ್ಕಾಗಿ ಭವ್ಯ ಆಗ್ರಹಗಳನ್ನು ಹೊಂದಬೇಕಾಗಿದೆ. ಅಲ್ಲಾಹನ ಧರ್ಮಕ್ಕಾಗಿ ಹೊಂದುವ ಆಗ್ರಹ ಈಡೇರದಿದ್ದರೂ ಅದಕ್ಕಾಗಿ ಅಪಾರ ಪ್ರತಿಫಲವಂತೂ ಬರೆಯಲಾಗುತ್ತದೆ. ಅಲ್ಲಾಹನ ಸಂದೇಶ ವಾಹಕರ(ಸ) ಈ ವಚನವನ್ನು ಒಮ್ಮೆ ಅವಲೋಕಿಸಿರಿ, "ನಿಮ್ಮ ಪೈಕಿ ಪ್ರತಿಯೋರ್ವ ವ್ಯಕ್ತಿಯೂ ತಾನೇನು ಆಗ್ರಹ ಹೊಂದಿದ್ದೇನೆ ಎಂಬುದನ್ನು ನೋಡಲಿ. ಅವನ ಆಗ್ರಹಗಳಲ್ಲಿ ಯಾವುದನ್ನು ಬರೆದಿಡಲಾಗುತ್ತದೆ ಎಂಬುದು ಅವನಿಗೆ ತಿಳಿದಿರುವುದಿಲ್ಲ."

[ವರದಿ: ಅಬೂ ಸಲಮ(ರ) - ತಿರ್ಮಿದಿ]

ಹಾಗಾಗಿ ನಮ್ಮ ಆಗ್ರಹಗಳು ಈ ರೀತಿ ಇರಬೇಕಾಗಿದೆ:

- ಮಾನವರ ಶಿರವು ಅಲ್ಲಾಹನ ಹೊರತು ಇನ್ನಾರ ಮುಂದೆಯೂ ಬಾಗ ಬಾರದು.
- ಸಮಾಜದಿಂದ ಶಿರ್ಕ್, ನವೀನಾಚಾರ ಮತ್ತು ಮಿಥ್ಯ ಆರಾಧ್ಯರುಗಳ ಪ್ರಭಾವ ಅಳಿದು ಹೋಗಬೇಕು.

- ನಮ್ಮ ಪರಿಸರದಲ್ಲಿ ನೀತಿವಂತ ಸಜ್ಜನರು ಇರಬೇಕು.
- ಸಮಾಜದ ಪ್ರಭಾವಿ ಮುಸ್ಲಿಮೇತರರು ಇಸ್ಲಾಮಿನ ಪರಿಧಿಯೊಳಗೆ ಬರಬೇಕು.
- ಸಮಾಜದಲ್ಲಿರುವ ಉಚ್ಚ-ನೀಚತೆ, ಅಸ್ಪಶ್ಯತೆ ಮ್ಮತ್ತು ಜಾತಿಪದ್ಧತಿ ಅಳಿದು ಹೋಗಬೇಕು.
- ಮಹಿಳೆಯರ ಮಾನದ ರಕ್ಷಣೆಯಾಗಬೇಕು.
- ಕಳ್ಳತನ ಮತ್ತು ಭ್ರಷ್ಟಾಚಾರ ಅಳಿದು ಹೋಗಬೇಕು.
- ಮದ್ಯಪಾನ, ಜೂಜಾಟ ಮತ್ತಿತರ ಕೆಡುಕುಗಳಿಂದ ಸಮಾಜ ಮುಕ್ತವಾಗಬೇಕು.
- ರಾತ್ರಿಯ ವೇಳೆಯಲ್ಲಿಯೂ ಯಾವ ಮಹಿಳೆಗೂ ಎಲ್ಲಿಗೆ ಹೋಗಬೇಕಾದರೂ ಯಾವನೇ ಪುರುಷನ ಭಯ ಕಾಡಬಾರದು.
- ಬಡವರು ಮತ್ತು ನಿರ್ಗತಿಕರಿಗೆ ಎಲ್ಲೆಡೆ ಸಹಾಯ ದೊರೆಯಬೇಕು.
- ಅನಾಥರು, ಬಡವರು, ನಿರ್ಗತಿಕರು ಅಪೇಕ್ಷಿತರು ಯಾರೇ ಆಗಲಿ, ಇತರರ ಮುಂದೆ ಕೈಯೊಡ್ಡಿ ಯಾಚಿಸುವಂತಾಗಬಾರದು.
- ಜನತೆಯ ಅವಶ್ಯಕತೆಗಳ ಕುರಿತು ಸಾದ್ಯಂತ ಕಾಳಜಿ ವಹಿಸುವ ಆಡಳಿತಗಾರರ ಆಯ್ಕೆಯಾಗಬೇಕು.
- ಇಲ್ಲಿನ ದೊಡ್ಡ ದೊಡ್ಡ ನ್ಯಾಯಾಲಯ ಹಾಗೂ ಕಚೇರಿಗಳಲ್ಲಿ ಅಲ್ಲಾಹ್ ಮತ್ತು ಅವನ ಸಂದೇಶವಾಹಕರ(ಸ) ಆದೇಶಗಳಂತೆ ತೀರ್ಪು ನೀಡುವಂತಾಗಬೇಕು.
- ಇಲ್ಲಿನ ಕಚೇರಿಗಳು, ಮಾರುಕಟ್ಟೆಗಳು, ಸಾರ್ವಜನಿಕ ಸ್ಥಳಗಳಲ್ಲಿ ಕುರ್‌ಆನ್ ಮತ್ತು ಪ್ರವಾದಿ ವಚನಗಳನ್ನು ತಿಳಿಯುವ ಹಾಗೂ ತಿಳಿಸುವ ವ್ಯವಸ್ಥೆಯಾಗಬೇಕು.
- ಜನರಿಗೆ ಸಕಾಲದಲ್ಲಿ ನ್ಯಾಯ ದೊರೆಯುವಂತಾಗಬೇಕು.
- ಅಕ್ರಮ ಎಸಗುವ ಪ್ರತಿಯೋರ್ವ ವ್ಯಕ್ತಿಗೂ ತನ್ನ ಸಣ್ಣದಾದ ಅನ್ಯಾಯಕ್ಕೂ ಶಿಕ್ಷೆ ದೊರೆಯಲಿದೆ ಎಂದು ಮನವರಿಕೆಯಾಗಬೇಕು.
- ಎಲ್ಲೂ ಹೆತ್ತವರು ಮಕ್ಕಳ ಅವಿಧೇಯತೆಯಿಂದ, ಪತ್ನಿಯು ತನ್ನ ಪತಿಯ ದೌರ್ಜನ್ಯದಿಂದ, ಮಕ್ಕಳು ಹಣದ ಅಡಚಣೆಯಿಂದ ನಲುಗುವಂತಾಗಬಾರದು.
- ಸಮಾಜದಲ್ಲಿ ಎಲ್ಲೂ ಯಾರೂ ನಿರ್ಗತಿಕರಾಗಬಾರದು ಮತ್ತು ಯಾರೂ ರಾತ್ರಿ ಹಸಿದು ಮಲಗುವಂತಾಗಬಾರದು.

ಅಲ್ಲಾಹನಿಗಾಗಿ ಹೊಂದಬಹುದಾದ ಆಗ್ರಹಗಳಿಗೆ ಮಿತಿ ಇಲ್ಲ, ಇಂತಹ ಆಗ್ರಹಗಳು

ಮನಸ್ಸಿನಲ್ಲಿ ಉದ್ಭವಿಸುತ್ತಲೇ ಇರುವುದು. ಖಂಡಿತವಾಗಿಯೂ ಅಲ್ಲಾಹನ ಬೆಂಬಲ ಮತ್ತು ಸಹಾಯವು ನಮ್ಮ ಉತ್ತಮ ಆಗ್ರಹಗಳಿಗೆ ತಕ್ಕಂತಿರುವುದು. ನಮ್ಮಲ್ಲಿ ಎಷ್ಟು ಆಗ್ರಹವಿರುವುದೋ ಅಷ್ಟನ್ನೇ ಅಲ್ಲಾಹ್ ನೀಡುವನು. ಅವನ ಭಂಡಾರದಲ್ಲಿ ಯಾವತ್ತೂ ಕೊರತೆ ಇರುವುದಿಲ್ಲ, ಇನ್ನು ನಾವು ಏನನ್ನು, ಎಷ್ಟು ಮತ್ತು ಹೇಗೆ ಪಡೆಯುವುದು ಎಂಬುದನ್ನು ತೀರ್ಮಾನಿಸಬೇಕಿದೆ. ಅಲ್ಲಾಹನಂತೂ ನಮ್ಮ ಗುಮಾನಿಯಂತೆ ನಮ್ಮೊಂದಿಗೆ ವ್ಯವಹರಿಸುವನು. ಕುದ್ಸೀ ಹದೀಸ್ ಒಂದರಲ್ಲಿ ಹೀಗೆ ಹೇಳಲಾಗಿದೆ, "ನನ್ನ ದಾಸನು ನನಗೆ ಸಂಬಂಧಿಸಿ ಎಷ್ಟು ಗುಮಾನಿಯನ್ನು ಹೊಂದಿರುತ್ತಾನೋ ನಾನು ಅವನೊಂದಿಗೆ ಅಂತೆಯೇ ಇರುವೆನು. ಒಂದು ವೇಳೆ ಅವನು ನನ್ನ ಬಗ್ಗೆ ಸದ್ಗುಮಾನಿಯನ್ನಿರಿಸಿದರೆ, ನಾನು ಅವನ ಪಾಲಿಗೆ ಉತ್ತಮನು; ಮತ್ತು ಒಂದು ವೇಳೆ ಅವನು ನನ್ನ ಬಗ್ಗೆ ಕೆಟ್ಟ ಗುಮಾನಿಯನ್ನಿರಿಸಿದರೆ, ನಾನೂ ಅವನ ಪಾಲಿಗೆ ಕೆಟ್ಟವನಾಗುವೆನು."

ಹಾಗಾಗಿ, ನಾವು ಇನ್ನಷ್ಟು ಉತ್ತಮವಾಗಿ ಕ್ರಿಯಾಶೀಲರಾಗಬೇಕಿದೆ. ದೊಡ್ಡ ದೊಡ್ಡ ಕಾರ್ಯಗಳನ್ನು ಉನ್ನತ ಸಂಕಲ್ಪ ಮತ್ತು ಹುಮ್ಮಸ್ಸಿನೊಂದಿಗೆ ಮಾಡಬೇಕು. ಇಷ್ಟಕ್ಕೂ ನಾವು ಬೇರೆ ಯಾರದೋ ಅಲ್ಲ, ಬದಲಾಗಿ ಅಲ್ಲಾಹನ ಧರ್ಮದ ಸೇವೆಯಲ್ಲಿ ತೊಡಗಿದವರಾಗಿದ್ದೇವೆ.

ಆದರೆ ನೆನಪಿಡಿ. ಅಲ್ಲಾಹನೊಂದಿಗೆ ದೃಢವಾದ ಸಂಬಂಧವನ್ನು ಹೊಂದಿರುವ ಮತ್ತು ದೇವಮಾರ್ಗದಲ್ಲಿ ಕಾರ್ಯತತ್ಪರನಾಗಿರುವ ವ್ಯಕ್ತಿ ಮಾತ್ರವೇ ಭವ್ಯ ಭವಿಷ್ಯದ ಕನಸನ್ನು ಕಾಣಬಲ್ಲನು. ತದ್ವಿರುದ್ಧವಾಗಿ ಅಲ್ಲಾಹನ ದಾಸ್ಯ-ಆರಾಧನೆಯಲ್ಲಿ ಆಲಸ್ಯ ತೋರುವವನು, ಧರ್ಮ ಎಂದರೆ ಕೆಲವು ಸಂಪ್ರದಾಯಗಳೆಂದು ಭಾವಿಸುವವನು ನಿಸ್ಸಂಶಯವಾಗಿಯೂ ಅಲ್ಲಾಹನಿಂದ ಶುಭ ನಿರೀಕ್ಷೆಯನ್ನು ಹೊಂದಲಾರ. ತನ್ನ ಮಾತಾ ಪಿತರಿಗೆ ಅವಿಧೇಯತೆ ತೋರುವ ಮಗನೂ ಅವರ ಮುಂದೆ ಯಾವುದೇ ಬೇಡಿಕೆಯನ್ನಿರಿಸಲಾರ ಎಂಬುದನ್ನು ನಾವು ಕಾಣುತ್ತೇವೆ. ಹೀಗಿರುತ್ತಾ ಅಲ್ಲಾಹನಿಗೆ ಅವಿಧೇಯತೆ ತೋರುವವನು ಅಲ್ಲಾಹನ ಕೃಪೆಯನ್ನು ಹೇಗೆ ತಾನೇ ಆಗ್ರಹಿಸಬಲ್ಲನು. ಹಾಗಾಗಿ ನಾವು ಸ್ವಯಂ ಅಲ್ಲಾಹನ ಧರ್ಮದಂತೆ ಕರ್ಮವೆಸಗುವ ಜನಕೂಟವಾಗಬೇಕಾಗಿದೆ. ಅದುವೇ ಅಲ್ಲಾಹನ ಕಡೆಗೆ ಜನರನ್ನು ಆಹ್ವಾನಿಸುವ ಕಾರ್ಯದ ಬೇಡಿಕೆಯಾಗಿದೆ.

❖ ❖ ❖ ❖